ರಾಮಕೃಷ್ಣ ಮಹಾಸಂಘದ ಏಕೈಕ ಕನ್ನಡ ಮಾಸಪತ್ರಿಕೆ



# ವಿವೇಕಪ್ರಭ

ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ

ಶ್ರೀರಾಮಕೃಷ್ಣರ ಲೀಲಾಕ್ಷೇತ್ರ – ದಕ್ಷಿಣೇಶ್ವರ

14/-

ಶ್ರೀರಾಮಕೃಷ್ಣರ ಜನ್ಮಕ್ಷೇತ್ರ – ಕಾಮಾರಪುಕುರ

ಮಾರ್ಚ್–2014

# ಪ್ರವಾಸ 2014 ರೈಲು ಹಾಗೂ ಬಸ್ಸಿನಲ್ಲಿ

## ಹೋಟೆಲ್ ರೂಂ ಹಾಗೂ ನಮ್ಮ ಊಟೋಪಚಾರದೊಂದಿಗೆ






### ದಕ್ಷಿಣ ಭಾರತ : 10 ದಿನಗಳು — Feb 22

ಗುರುವಾಯೂರ್, ಕಾಲಡಿ, ತಿರುವನಂತಪುರ, ಸುಚೀಂದ್ರಂ, ಕನ್ಯಾಕುಮಾರಿ, ರಾಮೇಶ್ವರಂ, ಮಧುರೈ, ತಿರುಚಿ, ಶ್ರೀರಂಗಂ, ತಂಜಾವೂರ್, ಕುಂಭಕೋಣಂ, ಚಿದಂಬರಂ, ತಿರುವಣ್ಣಾಮಲೈ, ನವಗ್ರಹ

### ಶಕ್ತಿಪೀಠಗಳು ಮತ್ತು ಸಿಮ್ಲಾ ಮನಾಲಿ ಸ್ಪೆಷಲ್ : 20 ದಿನಗಳು — Mar 17

ಚಂಡೀಘರ್, ಸಿಮ್ಲಾ, ಕುಫ್ರಿ, ಕುಲು ಮನಾಲಿ, ರೋತಾಂಗ್ ಪಾಸ್ (Optional), ವಶಿಷ್ಠ, ಬೈಜ್‌ನಾಥ್, ಚಾಮುಂಡ, ನೈನಾದೇವಿ, ಖಾಂಗ್ಡಾ, ಚಿಂತಪೂರ್ಣಿ, ಜ್ವಾಲಾಮುಖಿ, ಧರ್ಮಶಾಲಾ, ವೈಷ್ಣವೀದೇವಿ, ವಾಘಾ ಬಾರ್ಡರ್ (ಇಂಡೋ-ಪಾಕ್ ಬಾರ್ಡರ್), ಅಮೃತ್‌ಸರ್, ಕುರುಕ್ಷೇತ್ರ, ಶಾಕಂಬರಿ, ಹರಿದ್ವಾರ, ನವದೆಹಲಿ

### ದ್ವಾರಕ ಮತ್ತು ಅಷ್ಟ ಜ್ಯೋತಿರ್ಲಿಂಗ : 24 ದಿನಗಳು — Oct 25 Nov 15

ಪುಷ್ಕರ, ನಾಥದ್ವಾರ, ಕಾಂಕ್ರೋಲಿ, ಏಕಲಿಂಗ್ಜಿ, ಉದಯಪುರ, ಮೌಂಟ್ ಅಬು, ಮಾತೃಗಯಾ, ಶಿರಡಿ, ದ್ವಾರಕ, ಬೇಟ್‌ದ್ವಾರಕ, ನಾಗೇಶಂ, ಮೂಲ ದ್ವಾರಕ, ಪೋರಬಂದರ್, ವಿರಾವಲ್, ಸೋಮನಾಥ್, ಡಾಕೋರ್, ಅಹಮದಾಬಾದ್, ಉಜ್ಜೈನಿ, ಓಂಕಾರೇಶ್ವರ, ಪರ್ಲಿ, ಔರಂಗಾಬಾದ್, ಘೃಷ್ಣೇಶ್ವರ, ನಾಸಿಕ್, ತ್ರಿಯಂಬಕ್, ಶಿರಡಿ, ಶನಿಸಿಂಗನಾಪುರ, ಭೀಮಾಶಂಕರ್

### ಅಮರನಾಥ್ - ವೈಷ್ಣವಿ ದೇವಿ : 19 ದಿನಗಳು — June 25 July 01

### ಕೈಲಾಸ ಪರ್ವತ ಮತ್ತು ಮಾನಸ ಸರೋವರ : 14 ದಿನಗಳು

**Optional : ಪೋಖ್ರಾ, ಮುಕ್ತಿನಾಥ್, ಮನೋಕಾಮನ : 4 Days**

**Depr. : May 21, 25, 30 June 03, 12, 21, 30 July 07, 18, 27**



## ಶ್ರೀ ಹನ್ಸಾ ಟ್ರಾವೆಲ್ಸ್

## SHRI HANSAA TRAVELS



**RECOGNISED BY DEPARTMENT OF TOURISM, GOVT. OF KARNATAKA**

No. 640, 40th Cross (Near Prabha Eye Clinic), 8th Block, Jayanagar, Bangalore - 560 070.
☎: (080) 26543891 / 26643276 Mobile : (0) 9341415612 / 9341215612
e-mail : hansaatravels@gmail.com Web : www.kailashyatra.in

ಮಾರ್ಚ್ 2014 ಸಂಪುಟ 15 ಸಂಚಿಕೆ 03

# ವಿವೇಕಪ್ರಭ


























**ವ್ಯವಸ್ಥಾಪಕ ಸಂಪಾದಕರು**
*ಸ್ವಾಮಿ ಮುಕ್ತಿದಾನಂದ*

**ಸಂಪಾದಕರು**
*ಸ್ವಾಮಿ ವೀರೇಶಾನಂದ*

**ನೆರವು:**
*ಆರ್. ಎಸ್. ಪೂರ್ಣಾನಂದ*
*ಎನ್. ಎಸ್. ಶಾರದಾಪ್ರಸಾದ್*
*ಡಾ. ಕೆ. ಎಲ್. ಪ್ರಸನ್ನಾಕ್ಷಿ*
*ಡಾ. ಎಚ್. ಪಾಂಡುರಂಗ ವಿಠಲ*
*ನರಸಿಂಹಮೂರ್ತಿ*

**ಅಕ್ಷರ ಜೋಡಣೆ**
*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*

**ಮುದ್ರಣ**
*ಮಯೂರ್ ಗ್ರಾಫಿಕ್ಸ್, ಬೆಂಗಳೂರು*



**E-mail:**
vivekaprabha@hotmail.com
kannada.vivekaprabha@gmail.com
**Website:** vivekaprabha.net
**ಫೋನ್ :** 9481533505


**ಮುಖಪುಟ:**
ಶ್ರೀರಾಮಕೃಷ್ಣರ
ಜನ್ಮಕ್ಷೇತ್ರ – ಲೀಲಾಕ್ಷೇತ್ರ

**ಈ ಪತ್ರಿಕೆಯ ಧ್ಯೇಯ**

ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.
– ಸ್ವಾಮಿ ವಿವೇಕಾನಂದ


**ಚಂದಾ ವಿವರ : ಬಿಡಿ ಪ್ರತಿ:** ₹ 14; **ವಾರ್ಷಿಕ:** ₹ 140; **ಮೂರು ವರ್ಷ:** ₹ 375; **ಆಜೀವ** (25 ವರ್ಷ): ₹ 3,000; **ಪೋಷಕ ಸಹಾಯಧನ:** ₹ 5,000 ಅಥವಾ ಹೆಚ್ಚು. **ವಿದೇಶಗಳಿಗೆ: (ಏರ್‌ಮೇಲ್): ವಾರ್ಷಿಕ:** $20; **ಮೂರು ವರ್ಷ:** $60; **ಆಜೀವ** (25 ವರ್ಷ): $300; **ಪೋಷಕ ಸಹಾಯಧನ:** $600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/D ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.




**ತುಲ್ಯಲೋಷ್ಟಕಾಂಚನಂ ಚ ಹೇಯನೇಯಧೀಗತಂ**
**ಸ್ತ್ರೀಷು ನಿತ್ಯಮಾತೃರೂಪಶಕ್ತಿಭಾವಭಾವುಕಮ್ ।**
**ಜ್ಞಾನಭಕ್ತಿಭುಕ್ತಿಮುಕ್ತಿಶುದ್ಧಬುದ್ಧಿದಾಯಕಂ**
**ತಂ ನಮಾಮಿ ದೇವದೇವರಾಮಕೃಷ್ಣಮೀಶ್ವರಮ್ ॥**

ಮಣ್ಣುಚಿನ್ನಗಳನ್ನು ಸಮವಾಗೆಣಿಸಿದವನೂ, ರಾಗದ್ವೇಷಗಳನ್ನು ನೀಗಿಕೊಂಡವನೂ, ಸ್ತ್ರೀಯರಲ್ಲಿ ಸದಾ ಜಗನ್ಮಾತೃಶಕ್ತಿಯ ಭಾವವನ್ನು ಹೊಂದಿರುವವನೂ, ಜ್ಞಾನ ಭಕ್ತಿ ಭೋಗ ಮೋಕ್ಷ ಶುದ್ಧಬುದ್ಧಿಗಳನ್ನು ಕೊಡುವವನೂ, ದೇವದೇವನೂ ಈಶ್ವರನೂ ಆದ ರಾಮಕೃಷ್ಣನಿಗೆ ನಮಿಸುತ್ತೇನೆ.

**ಸರ್ವಧರ್ಮಗಮ್ಯಮೂಲಸತ್ಯತತ್ತ್ವದೇಶಕಂ**
**ಸಿದ್ಧಸರ್ವಸಂಪ್ರದಾಯಸಾಂಪ್ರದಾಯವರ್ಜಿತಮ್**
**ಸರ್ವಶಾಸ್ತ್ರಮರ್ಮದರ್ಶಿಸರ್ವವಿನ್ನಿರಕ್ಷರಂ**
**ತಂ ನಮಾಮಿ ದೇವದೇವರಾಮಕೃಷ್ಣಮೀಶ್ವರಮ್ ॥**

ಎಲ್ಲ ಧರ್ಮಗಳಿಂದಲೂ ಪಡೆಯಬಹುದಾದ ಮೂಲಸತ್ಯದ ಸ್ವರೂಪವನ್ನು ಒಂದೇ ಎಂದು ತೋರಿಸಿಕೊಟ್ಟವನೂ, ಎಲ್ಲ ಸಂಪ್ರದಾಯಗಳಲ್ಲಿ ಸಿದ್ಧಿಯನ್ನು ಹೊಂದಿದ್ದರೂ ತನ್ನದೇ ಆದ ವಿಶೇಷ ಸಂಪ್ರದಾಯವೊಂದನ್ನು ನಿರ್ಮಿಸದವನೂ, ಎಲ್ಲ ಶಾಸ್ತ್ರಗಳ ಸಾರವನ್ನು ಅರಿತಿದ್ದರೂ ನಿರಕ್ಷರನೂ, ದೇವದೇವನೂ ಈಶ್ವರನೂ ಆದ ರಾಮಕೃಷ್ಣನಿಗೆ ನಮಸ್ಕರಿಸುತ್ತೇನೆ.

**ಪಂಚವರ್ಷಬಾಲಭಾವಯುಕ್ತಹಂಸರೂಪಿಣಂ**
**ಸರ್ವಲೋಕರಂಜನಂ ಭವಾಬ್ಧಿಸಂಗಭಂಜನಮ್ ।**
**ಶಾಂತಿಸೌಖ್ಯಸದ್ಮಜೀವಜನ್ಮಭೀತಿನಾಶನಂ**
**ತಂ ನಮಾಮಿ ದೇವದೇವರಾಮಕೃಷ್ಣಮೀಶ್ವರಮ್ ॥**

ಐದು ವರ್ಷದ ಬಾಲಕನಂತಿರುವವನೂ, ಪರಮಹಂಸರೂಪಿಯೂ, ಎಲ್ಲ ಜನರನ್ನೂ ಸಂತೋಷಪಡಿಸುವವನೂ, ಸಂಸಾರ ಸಾಗರದಲ್ಲಿನ ಆಸಕ್ತಿಯನ್ನು ನಾಶಪಡಿಸುವವನೂ, ಶಾಂತಿಸೌಖ್ಯಗಳ ನೆಲೆವೀಡಾಗಿರುವವನೂ, ಜೀವರುಗಳ ಜನನಮರಣಗಳ ಭಯವನ್ನು ಹೋಗಲಾಡಿಸುವವನೂ, ದೇವದೇವನೂ ಈಶ್ವರನೂ ಆದ ರಾಮಕೃಷ್ಣನನ್ನು ವಂದಿಸುತ್ತೇನೆ.

– ಸ್ವಾಮಿ ವಿರಜಾನಂದರ *‘ಶ್ರೀರಾಮಕೃಷ್ಣ ಸ್ತೋತ್ರದಶಕ’* ದಿಂದ




ಆಳವಿಲ್ಲದ ಕೊಳದಲ್ಲಿ ಶುದ್ಧವಾದ ನೀರನ್ನು ಕುಡಿಯಬೇಕಾದರೆ ಮೇಲಿರುವ ನೀರನ್ನು ಸ್ವಲ್ಪವೂ ಕದಡದೆ ಕುಡಿಯಬೇಕು. ಅದನ್ನು ಕಲಕಿದರೆ ಬಗ್ಗಡ ಮೇಲೆದ್ದು ನೀರನ್ನೆಲ್ಲಾ ಕದಡುವುದು. ನೀನು ಪರಿಶುದ್ಧವಾಗಿರಬೇಕೆಂದು ಆಶಿಸಿದರೆ ಅಚಲವಾದ ಶ್ರದ್ಧೆಯಿರಲಿ. ಕೆಲಸಕ್ಕೆ ಬಾರದ ವಾದವಿವಾದಗಳಲ್ಲಿ ಕಾಲಹರಣ ಮಾಡದೆ, ಕ್ರಮೇಣ ಸಾಧನೆ ಮಾಡುತ್ತಾ ಹೋಗು. ಇಲ್ಲದೆ ಇದ್ದರೆ ನಿನ್ನ ಬುದ್ಧಿ ಕೆಡುವುದು.

ನೀನು ಸೇರಬೇಕೆಂದಿರುವ ಗುರಿಗೆ ಸರಿಯಾಗಿ ಸನ್ನಾಹ ಮಾಡಿಕೊ. ಹಾಲಿನಲ್ಲಿ ಬೆಣ್ಣೆ ಇದೆ ಎಂದು ಸುಮ್ಮನೆ ಕಿರುಚಿದರೆ ಬೆಣ್ಣೆ ಬರುವುದಿಲ್ಲ. ನಿನಗೆ ಬೆಣ್ಣೆ ಬೇಕಾದರೆ ಹಾಲನ್ನು ಮೊಸರು ಮಾಡಿ ಅದನ್ನು ಕಡೆಯಬೇಕು. ನೀನು ದೇವರನ್ನು ನೋಡ ಬೇಕಾದರೆ ಸಾಧನೆಗೆ ಕೈಹಾಕು. “ಹೇ ಭಗವಂತ, ಹೇ, ಭಗವಂತ!” ಎಂದು ಸುಮ್ಮನೆ ಕೂಗುವುದರಿಂದೇನು ಪ್ರಯೋಜನ?

ಅರಮನೆಯಲ್ಲಿ ರಾಜನನ್ನು ನೋಡಬೇಕಾದರೆ ಅವನು ಅರಮನೆಯ ಹತ್ತಿರ ಹೋಗಿ ಎಲ್ಲ ಬಾಗಿಲುಗಳನ್ನೂ ದಾಟಿ ಹೋಗಬೇಕು. ಆದರೆ ಮೊದಲನೆಯ ಬಾಗಿಲನ್ನು ದಾಟಿ ದೊಡನೆಯೆ “ದೊರೆ ಎಲ್ಲಿ?” ಎಂದು ಕೇಳಿದರೆ ಅವನು ಕಾಣುವುದಿಲ್ಲ. ಏಳು ಬಾಗಿಲುಗಳನ್ನು ದಾಟಿ ಹೋದರೆ ಆಗ ಮಾತ್ರ ಅವನನ್ನು ಕಾಣಬಹುದು.

ಸಾಕ್ಷಾತ್ಕಾರಕ್ಕೆ ನಿರಂತರ ಪ್ರಯತ್ನ ಅವಶ್ಯಕ. ನಾನು ಒಂದು ದಿನ ಭಾವಸಮಾಧಿಯಲ್ಲಿ ಹಲದಾರಪುಕುರವನ್ನು ನೋಡಿದೆನು. ಅಲ್ಲಿ ಒಬ್ಬ ಹಳ್ಳಿಯವನು ನೀರನ್ನು ತೆಗೆದುಕೊಳ್ಳುತ್ತಿದ್ದನು. ನೀರಿನ ಮೇಲೆದ್ದ ಪಾಚಿಯನ್ನು ತೆಗೆದುಕೊಂಡು ಪರೀಕ್ಷಿಸುತ್ತಿದ್ದನು. ಪಾಚಿಯನ್ನು ತೆಗೆಯದೆ ನೀರು ಹೇಗೆ ಸಿಕ್ಕುವುದಿಲ್ಲವೋ ಹಾಗೆಯೆ ಪರಮಾತ್ಮನ ಮೇಲೆ ಭಕ್ತಿ ಮತ್ತು ಆತನ ಸಾಕ್ಷಾತ್ಕಾರ – ಇವಕ್ಕೆ ಪ್ರಯತ್ನಪಟ್ಟಲ್ಲದೆ ಸಿಕ್ಕುವುದಿಲ್ಲ. ಧ್ಯಾನ, ಜಪ, ಕೀರ್ತನೆ, ಧರ್ಮ, ಪೂಜೆ ಮುಂತಾದ ಪುಣ್ಯ ಕೆಲಸಗಳೇ ಅವನನ್ನು ಸೇರುವುದಕ್ಕೆ ಮಾರ್ಗ.

ಭಗವಂತನ ನಾಮದ ಶಕ್ತಿಯಲ್ಲಿ ಯಾರು ಒಮ್ಮೆ ನಂಬಿ ಅನವರತವೂ ಅದನ್ನು ಉಚ್ಚರಿಸುವುದಕ್ಕೆ ಬಯಸುವನೋ ಆಗ ವಿವೇಕ ಮತ್ತು ಇತರ ಯಾವ ಭಕ್ತಿಸಾಧನೆಯೂ ಅವನಿಗೆ ಅವಶ್ಯಕವಿಲ್ಲ. ಅವನ ಸಂಶಯಗಳೆಲ್ಲ ನಿವಾರಣೆಯಾಗುವುವು; ಮನಸ್ಸು ಶುದ್ಧವಾಗುವುದು. ಹೀಗೆ ನಾಮದ ಬಲದಿಂದಲೇ ಭಗವಂತನನ್ನು ಪಡೆಯಬಹುದು.

ವೇದ ಮತ್ತು ಪುರಾಣಗಳನ್ನು ಓದಬೇಕು. ಆದರೆ ತಂತ್ರದ ಬೋಧನೆಯಂತೆ ಆಚರಿಸಬೇಕು. ಹರಿನಾಮವನ್ನು ನೀವು ಬಾಯಿಯಲ್ಲಿ ಉಚ್ಚಾರ ಮಾಡಬೇಕು, ಕಿವಿಯಿಂದಲೂ ಕೇಳಬೇಕು. ಕೆಲವು ರೋಗಗಳಿಗೆ ಔಷಧಿಯನ್ನು ಹೊರಗೆ ಲೇಪಿಸುವುದು ಮಾತ್ರವಲ್ಲ, ಒಳಗೂ ಸೇವಿಸಬೇಕು.

**–ಶ್ರೀರಾಮಕೃಷ್ಣ**




# ಶಾಸ್ತ್ರಸ್ವರೂಪಿ ಶ್ರೀರಾಮಕೃಷ್ಣ

**ಶಾಸ್ತ್ರಗಳ ಮಹತ್ವ:** ಹಿಂದೂಧರ್ಮದಲ್ಲಿ ಶಾಸ್ತ್ರಗಳ ಪ್ರಾಮುಖ್ಯತೆಯ ಬಗ್ಗೆ ಸ್ವಾಮಿ ವಿವೇಕಾನಂದರು ಹೀಗೆ ಹೇಳುತ್ತಾರೆ: " 'ಮಾನವನು ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು, ಭಗವಂತನನ್ನು ಭಾವಿಸಬೇಕು, ಭಗವಂತನನ್ನು ನೋಡಬೇಕು, ಭಗವಂತನ ಜೊತೆಗೆ ಮಾತನಾಡಬೇಕು' – ಈ ಭಾವನೆಯನ್ನು ಉಸಿರಾಗಿರಿಸಿಕೊಳ್ಳದಿರುವ ಒಂದು ಧರ್ಮಗ್ರಂಥವೂ ಭಾರತದಲ್ಲಿಲ್ಲ. ಇದೇ ನೈಜ ಧರ್ಮ. ಭಾರತದ ವಾತಾವರಣವು ಭಗವದ್ದರ್ಶನದಿಂದ ಪುನೀತರಾಗಿರುವ ಸಂತಪುರುಷರ ಕಥೆಗಳಿಂದ ಕೂಡಿ ರಮಣೀಯವಾಗಿದೆ. ಈ ಬಗೆಯ ತತ್ತ್ವಗಳೇ ಇವರೆಲ್ಲರ ಧರ್ಮದ ಆಧಾರಭೂತವಾಗಿವೆ. ಹಾಗೂ ಪ್ರಾಚೀನ ಗ್ರಂಥಗಳು ಮತ್ತು ಶಾಸ್ತ್ರಗಳು ಆಧ್ಯಾತ್ಮಿಕ ಸತ್ಯಗಳೊಂದಿಗೆ ನೇರ ಸಂಪರ್ಕವನ್ನು ಹೊಂದಿದ ಜನರ ಬರಹಗಳಾಗಿವೆ. ಈ ಪುಸ್ತಕಗಳನ್ನು ಬುದ್ಧಿಜೀವಿಗಳ ಸಲುವಾಗಿ ಬರೆದಿಲ್ಲ, ಅವನ್ನು ಕೇವಲ ತರ್ಕದಿಂದ ಅರ್ಥಮಾಡಿಕೊಳ್ಳಲೂ ಸಾಧ್ಯವಾಗದು. ಏಕೆಂದರೆ, ತಾವು ಬರೆದ ಸತ್ಯಗಳನ್ನು ಕಣ್ಣಾರೆ ಕಂಡವರು ಮಾತ್ರವೇ ಅವುಗಳನ್ನು ದಾಖಲಿಸಿದ್ದಾರೆ. ಹೀಗಾಗಿ ಆ ಉನ್ನತಸ್ತರಕ್ಕೆ ಏರಿದವರು ಮಾತ್ರವೇ ಇವುಗಳನ್ನು ಅರ್ಥಮಾಡಿಕೊಳ್ಳಬಲ್ಲರು."

ಶಾಸ್ತ್ರಗಳು ಮಾರ್ಗದರ್ಶಿ ಗ್ರಂಥಗಳು. ಒಬ್ಬ ಆಧ್ಯಾತ್ಮಿಕ ಸಾಧಕ ಅವುಗಳ ಸಹಾಯವನ್ನು ಪಡೆದುಕೊಂಡು, ಭಗವಂತನನ್ನು ಕುರಿತು ತಾನು ತಳೆಯಬೇಕಾದ ಮಾರ್ಗದ ಬಗ್ಗೆ ಅರಿವನ್ನು ಪಡೆದುಕೊಳ್ಳುತ್ತಾನೆ. ಹಾಗೆಯೇ ಶಾಸ್ತ್ರಗಳು ಆ ಅನುಭವಗಳ ಅಧಿಕೃತತೆಯನ್ನು ಖಚಿತಪಡಿಸುವಲ್ಲಿ ಆತನಿಗೆ ಸಹಾಯ ನೀಡುತ್ತವೆ. ಆದರೆ ಶ್ರೀರಾಮಕೃಷ್ಣರ ವಿಷಯದಲ್ಲಿ ನಡೆದದ್ದು ತದ್ವಿರುದ್ಧವಾದ ಪ್ರಕ್ರಿಯೆ. ಅವರು ತಮ್ಮ ಆಧ್ಯಾತ್ಮಿಕ ಸಾಧನೆಗಳನ್ನು ಕೈಗೊಳ್ಳುವ ಮೊದಲು ಯಾವ ಶಾಸ್ತ್ರಗ್ರಂಥಗಳನ್ನೂ ಅಧ್ಯಯನ ಮಾಡಲಿಲ್ಲ. ಹಾಗೆಯೇ ತಮ್ಮ ದಿವ್ಯ ಅನುಭವಗಳ ಅಧಿಕೃತತೆಯ ವಿಷಯದಲ್ಲಿ ಯಾವ ಲಕ್ಷ್ಯವನ್ನೂ ತೋರಲಿಲ್ಲ. ಆದರೆ ಕಾಲ ಸರಿದಂತೆ, ಅವರ ಆ ದಿವ್ಯ ಆನುಭಾವಿಕ ದರ್ಶನಗಳೇ ಪ್ರಾಚೀನ ಶಾಸ್ತ್ರಗ್ರಂಥಗಳಿಗೆ ಅಧಿಕೃತತೆಯನ್ನು ತಂದುಕೊಟ್ಟವು. ಇದನ್ನು ವಿವಿಧ ದೃಷ್ಟಿಕೋನಗಳ ಮೂಲಕ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸೋಣ.

**ಐತಿಹಾಸಿಕ ದೃಷ್ಟಿಕೋನ:** ಶ್ರೀರಾಮಕೃಷ್ಣರ ವ್ಯಕ್ತಿತ್ವ ಭಾರತೀಯ ಸಂಸ್ಕೃತಿಯಲ್ಲಿ ಆಳವಾಗಿ ಬೇರೂರಿತ್ತು. ಹೀಗಾಗಿ ಅವರ ಭಾವನೆಗಳು ಭಾರತೀಯ ಚಿಂತನೆಗೆ ಹೊಸದೇನೂ ಅಲ್ಲವೆಂದೇ ಹೇಳಬೇಕು. ಆದರೆ, ಅನೇಕ ಮಹಾನ್ ಸಂತರ ಮತ್ತು ಪ್ರವಾದಿಗಳ ನಡುವೆ ಅವರನ್ನು ವಿಶಿಷ್ಟರನ್ನಾಗಿಸುವ ಅಂಶವಾದರೂ ಏನು? ಅವರ ವ್ಯಕ್ತಿತ್ವದಲ್ಲಿ ಭಾರತೀಯ ಪ್ರಜ್ಞೆಯು ಪರಿಪೂರ್ಣವಾಗಿ ಮತ್ತು ಪ್ರಮಾಣೀಭೂತವಾಗಿ ಪ್ರಕಟಗೊಂಡಿತ್ತೆಂಬುದೇ ಅವರ ವೈಶಿಷ್ಟ್ಯ. ಭಾರತೀಯ ಮನಸ್ಸು ಸತ್ಯದ ಭಾಗಶಃ ಅಭಿಪ್ರಾಯಗಳಲ್ಲಿ ಸಮಾಧಾನ ಹೊಂದುವುದಿಲ್ಲ. ನಿತ್ಯತತ್ತ್ವದ ಸಮನ್ವಯ ಮತ್ತು ಅಖಂಡ ಅಭಿವ್ಯಕ್ತಿಗಾಗಿ ಅದು ಹಾತೊರೆಯುತ್ತದೆ. ಶ್ರೀರಾಮಕೃಷ್ಣರು ಅಂಥ ಆಧ್ಯಾತ್ಮಿಕ ಆಕಾಂಕ್ಷೆ ಮತ್ತು ಸಾರ್ಥಕತೆಯ ಪರಿಶುದ್ಧ ನಿದರ್ಶನವಾಗಿ ಕಂಗೊಳಿಸುತ್ತಾರೆ.

ಹಿಂದೂಧರ್ಮದ ಹೆಸರಿನ ಅಡಿಯಲ್ಲಿ ಕಾಣಬರುವ ಹಲವಾರು ಪವಿತ್ರ ಗ್ರಂಥಗಳು ಮತ್ತು ಅವಕ್ಕೆ ಸಂಬಂಧಿಸಿದ ಇತರೆ ಸಾಹಿತ್ಯದಲ್ಲಿ ಎರಡು ಲಕ್ಷಣಗಳನ್ನು ಸ್ಪಷ್ಟವಾಗಿ ಕಾಣುತ್ತೇವೆ:

**೧. ಮೊದಲನೆಯದಾಗಿ, ಅವು ಸಂತರ ಮತ್ತು ಭಗವದ್ಭಕ್ತರ ನೂರಾರು ಅನುಭವಗಳನ್ನು ಪ್ರಾಮಾಣಿಕವಾಗಿ ದಾಖಲಿಸುತ್ತವೆ.**

**೨. ಎರಡನೆಯದಾಗಿ, ಅವು ತತ್ತ್ವಶಾಸ್ತ್ರದ ಯಾವುದಾದರೂ ನಿರ್ದಿಷ್ಟ ವಾದವನ್ನು ಪ್ರತಿಪಾದಿಸುತ್ತವೆ.**

ಇನ್ನೊಂದು ಆಸಕ್ತಿಕರವಾದ ಅಂಶವೆಂದರೆ, ವೇದ ಮತ್ತು ಉಪನಿಷತ್ತುಗಳಲ್ಲಿ ಕಂಡುಬರುವ ಉದಾರ ಭಾವನೆ. ಅಲ್ಲಿನ ಹಲವಾರು ಅಭಿಪ್ರಾಯಗಳು ಮತ್ತು ವಾದಗಳಲ್ಲಿ ಯಾವ ಬಗೆಯ

ಸಂಕುಚಿತ ಮನೋಭಾವವನ್ನೂ ನಾವು ಕಾಣುವುದಿಲ್ಲ. ಆದರೆ ಆಮೇಲೆ ಬಂದ ಗ್ರಂಥಗಳಲ್ಲಿ ಒಂದು ರೀತಿಯ ಜಿಗುಟುತನವನ್ನು ಕಾಣುತ್ತೇವೆ. ಏಕೆಂದರೆ ಅವೆಲ್ಲ ಒಂದು ನಿರ್ದಿಷ್ಟ ತಾತ್ತ್ವಿಕ ವಾದವನ್ನು ಸಮರ್ಥಿಸುವ ಸಲುವಾಗಿ ಬರೆದ ಗ್ರಂಥಗಳು. ಇದರಿಂದಾಗಿ ಭಾರತದ ಇತಿಹಾಸದಲ್ಲಿ ಹಲವು ಶತಮಾನಗಳ ಕಾಲ ಅನವಶ್ಯಕವಾದ ತಾತ್ತ್ವಿಕ ವಾದವಿವಾದಗಳಲ್ಲೇ ಜನರ ಬೌದ್ಧಿಕ ಸಾಮರ್ಥ್ಯವು ಲುಪ್ತವಾಯಿತು. ಇದರಿಂದಾಗಿ ಅಗಾಧ ಪ್ರಮಾಣದಲ್ಲಿ ತಾತ್ತ್ವಿಕ ಸಾಹಿತ್ಯ ಸೃಷ್ಟಿಯಾಯಿತು ಎನ್ನುವುದೇನೋ ನಿಜ. ಪ್ರಪಂಚದಲ್ಲಿಯೇ ಅತ್ಯಂತ ಪ್ರತಿಭಾವಂತ ವ್ಯಕ್ತಿಗಳು ಈ ಸಾಹಿತ್ಯವನ್ನು ರಚಿಸಿದರೆಂಬುದೂ ನಿಜ. ಆದರೆ ಇದು ಒಟ್ಟಾರೆ ಸಮಾಜದ ಆಧ್ಯಾತ್ಮಿಕ ಉನ್ನತಿಗೆ ಕೊಡುಗೆ ನೀಡಿದ್ದು ಅತ್ಯಲ್ಪವೆಂದೇ ಹೇಳಬೇಕು. ಅದಕ್ಕೆ ಬದಲಾಗಿ ಬಹುಸಂಖ್ಯೆಯ ಜನಸಾಮಾನ್ಯರನ್ನು ಆಧ್ಯಾತ್ಮಿಕ ಪ್ರಭಾವದಿಂದ ಅದು ದೂರವಿಟ್ಟಿತು. ಇಂಥ ಬೌದ್ಧಿಕತೆಯೇ ನೈಜ ಆಧ್ಯಾತ್ಮಿಕ ದರ್ಶನದ ಮೇಲೆ ಯಾವಾಗ ಮೇಲುಗೈಯನ್ನು ಪಡೆದುಕೊಂಡಿತೋ, ಆಗ ಹಿಂದೂಸಮಾಜದ ಆಧ್ಯಾತ್ಮಿಕ ಅವನತಿ ಪ್ರಾರಂಭವಾಯಿತು. ಕಾಲಕಾಲಕ್ಕೆ ಅವತರಿಸಿ ಬಂದ ನೂರಾರು ಸಂತರು, ಮಹಾತ್ಮರು ಈ ಅಧಃಪತನವನ್ನು ತಡೆಯಲು ಪ್ರಯತ್ನಪಟ್ಟರು; ನೈತಿಕ ಮತ್ತು ಧಾರ್ಮಿಕ ಮೌಲ್ಯಗಳ ಪ್ರಸಾರದ ಮೂಲಕ ಜನಸಾಮಾನ್ಯರಲ್ಲಿ ಆಧ್ಯಾತ್ಮಿಕ ಜಾಗೃತಿಯನ್ನು ಉಂಟುಮಾಡಿದರು. ಇದರಿಂದ ಸಮಾಜದ ಕೆಳವರ್ಗದವರು ಕೂಡ ಪ್ರಯೋಜನ ಹೊಂದಿದರು. ಆದರೂ, ಆಧುನಿಕ ಕಾಲದಲ್ಲಿ ಹಿಂದೂಧರ್ಮವು ಪಾಶ್ಚಾತ್ಯ ಚಿಂತನೆ ಮತ್ತು ಅದರ ಭೌತಿಕವಾದದ ಪ್ರಭಾವದ ಪ್ರವಾಹದ ಹೊಡೆತಕ್ಕೆ ಸಿಲುಕಿ ಅತಿ ಸಂಕಷ್ಟಕ್ಕೆ ಒಳಗಾಯಿತು.

ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಭಾರತದೇಶಕ್ಕೆ, ತನ್ನ ಆಧ್ಯಾತ್ಮಿಕ ಶ್ರೇಷ್ಠತೆಯನ್ನು ಪುನಃ ಮೇಲೆತ್ತಿ ಮೆರೆಯುವ ಆವಶ್ಯಕತೆ ತಲೆದೋರಿತ್ತು. ಪವಿತ್ರಗ್ರಂಥಗಳಲ್ಲಿನ ಹಲವಾರು ತಾತ್ತ್ವಿಕ ವಿಚಾರಗಳ ಬಗ್ಗೆ ವಾಗ್ವಿವಾದಗಳನ್ನು ಮುಂದು ವರೆಸಿಕೊಂಡು ಹೋಗುವ ಕಾಲ ಅದಾಗಿರಲಿಲ್ಲ. ಅದಕ್ಕೆ ಬದಲಾಗಿ ಅವುಗಳಲ್ಲಿ ಅಡಕವಾಗಿರುವ ಶ್ರೇಷ್ಠ ಆಧ್ಯಾತ್ಮಿಕ ಮೌಲ್ಯಗಳ ಜೀವಂತ ನಿದರ್ಶನದ ಆವಶ್ಯಕತೆ, ಹಿಂದೆಂದಿಗಿಂತಲೂ ಹೆಚ್ಚಾಗಿತ್ತು. ಹಾಗೆಯೇ ಶಾಸ್ತ್ರಗ್ರಂಥಗಳಲ್ಲಿರುವ ದರ್ಶನಗಳು ಮತ್ತು ಸಿದ್ಧಿಗಳು ಸತ್ಯವಾದುವು ಮತ್ತು ಅಧಿಕೃತವಾದುವು ಎಂದು ಜಗತ್ತಿಗೆ ಪ್ರಮಾಣೀಕರಿಸಿ ತೋರಿಸಬೇಕಾಗಿತ್ತು. ಒಟ್ಟಿನಲ್ಲಿ ಶಾಸ್ತ್ರಗ್ರಂಥಗಳ ಕೇವಲ ಅಧ್ಯಯನಕ್ಕಿಂತ ಹೆಚ್ಚಾಗಿ, ಅವುಗಳನ್ನು ಅನುಷ್ಠಾನಕ್ಕೆ ತಂದ ವ್ಯಕ್ತಿಯೊಬ್ಬರ ಆವಶ್ಯಕತೆ ಕಂಡುಬಂದಿತ್ತು. ಏಕೆಂದರೆ ಹೀಗಾದಾಗ ಮಾತ್ರವೇ ಶಾಸ್ತ್ರಗ್ರಂಥಗಳು ಪ್ರತಿಪಾದಿಸುವ ಧರ್ಮ ಮತ್ತು ತತ್ತ್ವಶಾಸ್ತ್ರಗಳಿಗೆ ಅಧಿಕೃತತೆಯನ್ನು ದೊರಕಿಸಿ ಕೊಡಲು ಸಾಧ್ಯ; ಆ ಮೂಲಕ ಧರ್ಮದ ಪುನರುತ್ಥಾನವೂ ಸಾಧ್ಯ.

ವಿರೋಧಾಭಾಸವೋ ಎಂಬಂತೆ ಈ ಬೃಹದ್ ಜವಾಬ್ದಾರಿಯನ್ನು ಹೊತ್ತುಕೊಂಡು, ಸಮರ್ಥವಾಗಿ ನಿರ್ವಹಿಸಿದ ಮಹಾನ್‌ವ್ಯಕ್ತಿ, ಲೌಕಿಕ ದೃಷ್ಟಿಕೋನದಲ್ಲಿ 'ಅವಿದ್ಯಾವಂತರು' ಎಂದೇ ಪರಿಗಣಿಸಲ್ಪಟ್ಟಿದ್ದರು. ಅವರ ಪಾಲಿಗೆ ಬಂದ ಕಾರ್ಯ, ಶಾಸ್ತ್ರಗ್ರಂಥಗಳ ಅಧ್ಯಯನ ಮತ್ತು ವ್ಯಾಖ್ಯಾನವಾಗಿರಲಿಲ್ಲ. ಅದಕ್ಕೆ ಬದಲಾಗಿ, ಆ ಗ್ರಂಥಗಳ ಸಾರಸರ್ವಸ್ವವಾದ ಸತ್ಯತತ್ತ್ವಗಳು ಪ್ರಕಾಶಮಾನವಾಗಿ ಪ್ರಕಟವಾಗುವಂತಹ ದಿವ್ಯಜೀವನವನ್ನು ನಡೆಸುವುದಾಗಿತ್ತು. ಶ್ರೀರಾಮಕೃಷ್ಣರೆಂಬ ಹೆಸರಿನ ಈ ದಿವ್ಯ ಮಾನವರ ಪರಮಾದ್ಭುತ ಸಾಮರ್ಥ್ಯ ಇಲ್ಲಿ ಅಡಗಿತ್ತು. ಅವರು ತಮ್ಮ ಜೀವನವನ್ನು ಪ್ರಾಚೀನ ಆಧ್ಯಾತ್ಮಿಕ ಮೌಲ್ಯಗಳ ಪುನರುಜ್ಜೀವನಕ್ಕೆ ಒಂದು ಆದರ್ಶ ಭೂಮಿಕೆಯನ್ನಾಗಿ ರೂಪಿಸಿದರು. ಆಮೂಲಕ ಅವುಗಳನ್ನು ಪ್ರತಿಪಾದಿಸುವ ಶಾಸ್ತ್ರ ಗ್ರಂಥಗಳಿಗೂ ನವೀನ ಚೈತನ್ಯವನ್ನು ತುಂಬಿದರು.

**ವೇದ ಮತ್ತು ವೇದಾಂತ ದೃಷ್ಟಿಕೋನ:** 'ವೇದಾಂತ' ಎಂಬ ಪದವು ಉಪನಿಷತ್ತುಗಳನ್ನೂ ಮತ್ತು ಅವು ಬೋಧಿಸುವ ತತ್ತ್ವಶಾಸ್ತ್ರವನ್ನೂ ಸೂಚಿಸುತ್ತದೆ. ಉಪನಿಷತ್ತುಗಳು ವೇದಗಳ ಅವಿಭಾಜ್ಯ ಅಂಗಗಳು, ಸರಿ. ಆದರೆ ಅವುಗಳ ವಿಷಯವಸ್ತು ಮತ್ತು ಉದ್ದೇಶ ವೈದಿಕ ಸಾಹಿತ್ಯದ ಇತರ ಭಾಗಗಳಿಗಿಂತ ಭಿನ್ನವಾಗಿವೆ. ಸಂಹಿತೆಗಳು ಮತ್ತು ಬ್ರಾಹ್ಮಣ ಭಾಗಗಳಲ್ಲಿ ಯಜ್ಞ–ಯಾಗ ಮುಂತಾದ ಆಚರಣೆಗಳಿಗೆ ಮಹತ್ವ ನೀಡಲಾಗಿದೆ. ಆರಣ್ಯಕ ಮತ್ತು ಉಪನಿಷತ್ತುಗಳಲ್ಲಿ ತತ್ತ್ವಜ್ಞಾನ ಮತ್ತು ಉಪಾಸನೆ–ಧ್ಯಾನಗಳಿಗೆ ಪ್ರಾಮುಖ್ಯತೆ. ಬಾಹ್ಯ ಪ್ರವೃತ್ತಿಯಿಂದ ಆರಂಭವಾಗಿ, ಹಲವಾರು ವರ್ಷಗಳ ವಿಕಾಸದ ಮೂಲಕ ಆಂತರಿಕ ಪ್ರವೃತ್ತಿಯು ನಿಧಾನವಾಗಿ ಮೂಡಿಬರುವ ಪ್ರಶಾಂತ ಪರಿವರ್ತನೆಯನ್ನು ನಾವಿಲ್ಲಿ ನೋಡುತ್ತೇವೆ. ಈ ವಿಕಾಸ ಪ್ರಕ್ರಿಯೆ ತ್ವರಿತವಾಗಿಯೇನೂ ನಡೆಯಲಿಲ್ಲ. ಹಾಗೂ ಈ ಪ್ರವೃತ್ತಿಗಳಲ್ಲಿ ಪರಸ್ಪರ ವೈಮನಸ್ಯವಿರುವುದನ್ನು ನಾವು ವೈದಿಕ ಸಾಹಿತ್ಯದಲ್ಲಿ ಕಾಣುವುದಿಲ್ಲ. ವೈದಿಕಧರ್ಮವು ಪ್ರಪಂಚವಿಮುಖವಾದ ಧರ್ಮವಲ್ಲ. ಅದಕ್ಕೆ ಬದಲಾಗಿ ಈ ಜಗತ್ತಿನ ಜೀವನದ ಬಗ್ಗೆ ತುಂಬು ಆಶಾಭಾವನೆಯನ್ನೂ ಉತ್ಸಾಹವನ್ನೂ ನಾವಿಲ್ಲಿ ನೋಡುತ್ತೇವೆ. ಮಾನವ ಜೀವಿತದಲ್ಲಿ ಮತ್ತು ಅದರಲ್ಲಿನ ಲೌಕಿಕ ಅಥವಾ ಆಧ್ಯಾತ್ಮಿಕ ಯಶಸ್ಸು ಹಾಗೂ ಸಾಧನೆಗಳಲ್ಲಿ ಸಕಾರಾತ್ಮಕವೂ ಸಕ್ರಿಯಾತ್ಮಕವೂ ಆದ ಧೋರಣೆಯನ್ನು ಸ್ಪಷ್ಟವಾಗಿ ಭಾವಿಸುತ್ತೇವೆ. ಇದಲ್ಲದೆ, ಸರ್ವತೋಮುಖ 'ಜೀವನ ಸಂಭ್ರಮ'ವು ಅನುರಣಿತವಾಗಿ ಇರುವುದನ್ನೂ ಅನುಭವಿಸುತ್ತೇವೆ.

'ಬ್ರಹ್ಮನ್' ಎಂದು ಕರೆಯಲಾಗುವ ಅಖಂಡ ವಿಶ್ವತತ್ತ್ವವು ಪ್ರತಿಯೊಬ್ಬ ಜೀವಿಯ ಅಂತಸ್ಸತ್ವವಾದ 'ಆತ್ಮ'ಕ್ಕಿಂತ ಅಭಿನ್ನವಾದುದು ಎಂದು ವೇದಾಂತ ಪ್ರತಿಪಾದಿಸುತ್ತದೆ. ಈ ಅಖಂಡ ಜ್ಞಾನದ ನಿರಂತರ, ರೋಮಾಂಚಕಾರಿ ಹಾಗೂ ಮನೋಹರ ಅನ್ವೇಷಣಾ ಪಯಣವನ್ನು ನಾವು ಉಪನಿಷತ್ತುಗಳಲ್ಲಿ ಕಾಣುತ್ತೇವೆ. ಹಾಗೆಂದು ವೇದಾಂತವು ಲೌಕಿಕ ಬದುಕನ್ನೇನೂ ಅಲ್ಲಗಳೆಯುವುದಿಲ್ಲ. ಮೇಲೆ ಹೇಳಿದ ಅಖಂಡ ತತ್ತ್ವಜ್ಞಾನದ ಬೆಳಕಿನಲ್ಲಿ ಪ್ರಪಂಚವನ್ನೂ ಮತ್ತು ಮಾನವ ಜೀವಿತವನ್ನೂ ಸರಿಯಾದ ಮತ್ತು ವಾಸ್ತವಿಕ ದೃಷ್ಟಿಕೋನದಿಂದ ಅರ್ಥ

ಮಾಡಿಕೊಳ್ಳುವ ಪ್ರಯತ್ನವನ್ನು ವೇದಗಳು ಮತ್ತು ವೇದಾಂತ – ಎರಡೂ ಮಾಡುತ್ತವೆ. ಈ ಪ್ರಯತ್ನವು ಲೌಕಿಕ ಜಗತ್ತಿನ ಸೀಮಿತತೆಗಳಿಂದ ಮತ್ತು ಬಂಧನಗಳಿಂದ ಬಿಡಿಸಿಕೊಂಡು, ತತ್ತ್ವಸಾಕ್ಷಾತ್ಕಾರವನ್ನು ಮಾಡಿಕೊಳ್ಳುವ ತುಮುಲದಿಂದ ಮೂಡಿದ್ದಾಗಿದೆ. ಲೌಕಿಕ ಅಸ್ತಿತ್ವದ ಅರ್ಥಹೀನತೆಯ ಸ್ಪಷ್ಟ ಅರಿವಿನ ಮೂಲಕ ಪಾರಮಾರ್ಥಿಕ ಸ್ವಾತಂತ್ರ್ಯವನ್ನು ಗಳಿಸಿ ಕೊಳ್ಳುವುದೇ ಭಾರತೀಯ ಆಧ್ಯಾತ್ಮಿಕ ನಿಲುವಾಗಿದೆ. ಶ್ರೀರಾಮ ಕೃಷ್ಣರು ವೇದ ಮತ್ತು ವೇದಾಂತಗಳಲ್ಲಿ ಕಂಡುಬರುವ ಮೇಲಿನ ಮೂಲಭೂತ ಲಕ್ಷಣಗಳೆಲ್ಲದರ ಮೂರ್ತರೂಪರಾಗಿದ್ದಾರೆ ಎನ್ನಬಹುದು. ಆ ತತ್ತ್ವಗಳನ್ನು ಅತ್ಯಂತ ಉನ್ನತ ಸ್ತರದಲ್ಲಿ, ಉದಾತ್ತ ರೀತಿಯಲ್ಲಿ ಮತ್ತು ಪರಿಶುದ್ಧ ರೂಪದಲ್ಲಿ ಶ್ರೀರಾಮ ಕೃಷ್ಣರು ತಮ್ಮ ವ್ಯಕ್ತಿತ್ವ ಮತ್ತು ಸಾಧನಾ ಜೀವಿತಗಳಲ್ಲಿ ವ್ಯಕ್ತಪಡಿಸುತ್ತಾರೆ. ಅವರದು ವೇದವೇದಾಂತಗಳ ಸಾರಭೂತ ವಾದ ವ್ಯಕ್ತಿತ್ವ. ಇದರ ಸಾರಸತ್ವವನ್ನೇ ಅವರು ಸರಳಭಾಷೆಯಲ್ಲಿ ತಮ್ಮ ಅನುಯಾಯಿಗಳಿಗೆ ಬೋಧಿಸಿ, ಅವರಲ್ಲೂ ಈ ವಿಶ್ವವ್ಯಾಪಕ ಭಾವನೆಗಳನ್ನು ಉದ್ದೀಪಿಸಿದರು. ಹೀಗೆ ಶ್ರೀರಾಮ ಕೃಷ್ಣರ ಜೀವನವು ಶತಶತಮಾನಗಳಷ್ಟು ಪ್ರಾಚೀನವಾದ ವೈದಿಕ ಆದರ್ಶದ ಪರಿಪೂರ್ಣ ಮತ್ತು ಪರಿಶುದ್ಧ ಪುನರುಜ್ಜೀವನವನ್ನು ಸಂಕೇತಿಸುತ್ತದೆ. ಇದು ಮಧ್ಯಕಾಲೀನ ಯುಗದಲ್ಲಿ ಕಂಡುಬಂದ ಯಾವುದೇ ಸಾಂಪ್ರದಾಯಿಕ ತತ್ತ್ವಶಾಸ್ತ್ರ ಸಿದ್ಧಾಂತಕ್ಕೆ ಹೋಲಿಸಿದಲ್ಲಿ ಅನಂತದಷ್ಟು ಉದಾರದೃಷ್ಟಿಯನ್ನೂ, ವಿಶ್ವ ವ್ಯಾಪಕ ಮನೋಭಾವವನ್ನೂ ಹೊಂದಿದೆ. ಶ್ರೀರಾಮಕೃಷ್ಣರು ಆಧುನಿಕ ಆಧ್ಯಾತ್ಮಿಕ ಪ್ರವಾದಿ ಮಾತ್ರವಲ್ಲದೆ, ಭಾರತೀಯ ಸಂಸ್ಕೃತಿಯ ಮೂಲ ಆಕರವಾದ ವೈದಿಕ ಸಂಸ್ಕೃತಿಯ ಪುನರು ದ್ಧಾರಕರೂ ಆಗಿದ್ದಾರೆ ಎನ್ನುವುದು ಇದರಿಂದ ಸ್ಪಷ್ಟವಾಗುತ್ತದೆ.

**ಅನುಭಾವ ದೃಷ್ಟಿಕೋನ:** ಹಿಂದೂ ಧರ್ಮಗ್ರಂಥಗಳಲ್ಲಿ ಮಹಾತ್ಮರ ಮತ್ತು ಸಂತರ ದಿವ್ಯ ಅನುಭವಗಳ ಕೂಲಂಕಷ ವಿವರಣೆಯನ್ನು ಕಾಣುತ್ತೇವೆ. ಇದಕ್ಕೆ ಶಿವಶರಣರ ಪರಿಭಾಷೆಯಲ್ಲಿ 'ಅನುಭಾವ' ಎಂದು ಹೆಸರು. ಇಂಥ ಅನುಭವಗಳನ್ನು ವ್ಯಕ್ತಪಡಿಸುವಲ್ಲಿ ಧರ್ಮಗ್ರಂಥಗಳು ವೈವಿಧ್ಯಮಯ ಪ್ರಕಾರಗಳನ್ನು ತಳೆದಿದ್ದರೂ, ಆ ಎಲ್ಲ ಅನುಭವಗಳೂ ಇಂದ್ರಿಯಾತೀತವಾದುವು ಎನ್ನು ವುದರಲ್ಲಿ ಅವುಗಳಲ್ಲಿ ಐಕ್ಯಮತ್ಯವಿದೆ. ಬಹುಶಃ ಆ ಎಲ್ಲ ಅನುಭವಗಳ ಪ್ರತ್ಯಕ್ಷ ಪ್ರದರ್ಶನವನ್ನು ನಾವು ಶ್ರೀರಾಮಕೃಷ್ಣರ ಜೀವನದಲ್ಲಿ ನೋಡುತ್ತೇವೆ. ಶ್ರೀಅರವಿಂದರು ಹೇಳುವಂತೆ, ಹಿಂದೆ ಆಗಿಹೋದ ಸಾವಿರಾರು ಸಂತ ಮಹಾತ್ಮರ ಆಧ್ಯಾತ್ಮಿಕ ಅನುಭವಗಳ ನವೀಕರಣವನ್ನು ಮತ್ತು ಸಾಮರಸ್ಯವನ್ನು ಶ್ರೀರಾಮಕೃಷ್ಣರಲ್ಲಿ ಕಾಣಬಹುದು. ಈ ರೀತಿಯಲ್ಲಿ ಅವರು ಶಾಸ್ತ್ರಗ್ರಂಥಗಳು ದಾಖಲಿಸುವ ಆಧ್ಯಾತ್ಮಿಕ ದರ್ಶನಗಳ ಜೀವಂತ ನಿದರ್ಶನವಾಗಿದ್ದಾರೆ.

ಪವಿತ್ರ ಗ್ರಂಥಗಳಲ್ಲಿ ದಾಖಲಾಗಿರುವ ದಾರ್ಶನಿಕ ಅನುಭವ ಗಳು ಪರಸ್ಪರ ವಿರುದ್ಧವಾಗಿವೆ ಎಂದು ಕೆಲವೊಮ್ಮೆ ಅನ್ನಿಸ ಬಹುದು. ಸ್ವಾರಸ್ಯದ ಅಂಶವೆಂದರೆ, ಶ್ರೀರಾಮಕೃಷ್ಣರಲ್ಲಿ ಅವೆಲ್ಲವೂ ಪರಿಪೂರ್ಣ ಸಾಮರಸ್ಯವನ್ನು ಹೊಂದಿವೆ. ಒಬ್ಬ ಭಕ್ತನಾಗಿ ಅವರು ರಾಮ, ಕೃಷ್ಣ ಮುಂತಾದ ಹಲವಾರು ದೇವತಾರೂಪಗಳ ದರ್ಶನಗಳನ್ನು ಪಡೆದುಕೊಂಡರು. ಅನಂತರ ಅವರ ಮನಸ್ಸು ಅತ್ಯಂತ ಉನ್ನತವಾದ ಅದ್ವೈತಾನು ಭೂತಿಯ ಪರಾಕಾಷ್ಠೆಯನ್ನು ಏರಿತು. ಮುಂದೆ ಅವರು ಶ್ರದ್ಧಾಳುವಾದ ಒಬ್ಬ ಮುಸಲ್ಮಾನ ಅಥವಾ ಕ್ರೈಸ್ತ ಹೊಂದಿರುವ ವಿಶಿಷ್ಟ ಭಕ್ತಿಭಾವದಲ್ಲಿಯೂ ಲೀನರಾದರು. ಹೀಗೆ ಅನುಭಾವದ ಅತ್ಯುತ್ಕೃಷ್ಟ ಅಭಿವ್ಯಕ್ತಿಗಳೆಲ್ಲವೂ ಶ್ರೀರಾಮಕೃಷ್ಣರ ವಿಶ್ವಾತ್ಮಕ ವ್ಯಕ್ತಿತ್ವದಲ್ಲಿ ಸುಂದರವಾಗಿ ಬೆಸುಗೆಗೊಂಡವು. ಈ ಬಗೆಯ ದಾರ್ಶನಿಕ ಸಿದ್ಧಿಯಿಂದ, ಅವರು ದರ್ಶನಗಳು ಮತ್ತು ಅನುಭಾವಗಳ ನಡುವಣ ಸಾಮರಸ್ಯವನ್ನು ಪ್ರತಿನಿಧಿಸುತ್ತಾರೆ. ಅದು ಮಾತ್ರವಲ್ಲ, ಅವುಗಳ ಅಧಿಕೃತ ದಾಖಲೆಗಳಾದ ಶಾಸ್ತ್ರ ಗ್ರಂಥಗಳ ಸಾಮರಸ್ಯದ ಪ್ರತಿರೂಪರಾಗಿಯೂ ಕಂಗೊಳಿಸುತ್ತಾರೆ.

**ತಾತ್ತ್ವಿಕ ದೃಷ್ಟಿಕೋನ:** ಶಾಸ್ತ್ರಗ್ರಂಥಗಳು ಅವುಗಳ ರಚನಾಕಾಲದಲ್ಲಿ ಪ್ರಚಲಿತವಾಗಿದ್ದ ತಾತ್ತ್ವಿಕ ಅಭಿಪ್ರಾಯಗಳ ಕೋಶಾಗಾರಗಳು ಕೂಡ ಹೌದು. ವೇದ ಮತ್ತು ವೇದಾಂತಗಳಲ್ಲಿ ವಿವಿಧ ರೂಪದ ತಾತ್ತ್ವಿಕ ವಾದಗಳು ಕಂಡುಬರುತ್ತವೆ. ಆದರೂ, ಅವುಗಳನ್ನು ಒಗ್ಗೂಡಿಸಿ, ಒಂದೇ ನಿಷ್ಕರ್ಷೆಗೆ ಬರುವ ಪ್ರಯತ್ನವನ್ನೇನೂ ಆ ಮೂಲಗ್ರಂಥಗಳಲ್ಲಿ ನಾವು ಕಾಣುವುದಿಲ್ಲ. ಒಂದು ಗ್ರಂಥದಲ್ಲಿಯೇ **'ಮಾನವ'**, **'ದೇವರು'** ಮತ್ತು **'ಜಗತ್ತು'** – ಈ ಮೂಲಭೂತ ತಾತ್ತ್ವಿಕ ಅಂಶಗಳ ಬಗ್ಗೆ ಹಲವು ದೃಷ್ಟಿಕೋನಗಳು ಅಡಕವಾಗಿರುವುದಕ್ಕೂ ಸಾಧ್ಯ. ಇಂಥ ಅನುಪಮ ಉದಾರದೃಷ್ಟಿಯು, ಕಾಲ ಕಳೆದಂತೆ, ವಿವಿಧ ದರ್ಶನ ಶಾಖೆಗಳಾಗಿ ಕವಲೊಡೆಯಿತು. ಆ ಶಾಖೆಗಳ ಅನುಯಾಯಿಗಳು ತಮ್ಮ ವಾದವೇ ನಿಜವಾದ ತತ್ತ್ವವೆಂದು ಪಟ್ಟುಹಿಡಿಯಲಾರಂಭಿಸಿದರು. ಇದರಿಂದಾಗಿ ಭಾರೀ ವಾಗ್ವಿವಾದಗಳ ಸರಣಿಯೇ ಪ್ರಾರಂಭವಾಯಿತು. ಇಂಥ ಎಲ್ಲ ವಿಭಿನ್ನ ತಾತ್ತ್ವಿಕ ಭಿನ್ನತೆಗಳಿಗೂ ಅವಕಾಶವೀಯುವ, ಹಲವಾರು ಪಂಗಡಗಳ ಒಕ್ಕೂಟವೇ ಹಿಂದೂಧರ್ಮ. ನಮ್ಮ ಸನಾತನ ಧರ್ಮದ ಈ ಸರ್ವಾತ್ಮಕ ಚಿತ್ರಣವನ್ನು ವಿಶ್ವಾತ್ಮ ಭಾವನೆಯ ಮೂರ್ತಿರೂಪರಾದ ಶ್ರೀರಾಮಕೃಷ್ಣರಲ್ಲಿ ಸ್ಪಷ್ಟವಾಗಿ ಗುರುತಿಸಬಹುದು.

ಆದ್ದರಿಂದ, ಶ್ರೀರಾಮಕೃಷ್ಣರು ಮಾತ್ರವೇ ವೈದಿಕ ಋಷಿಗಳ ಉದಾರ ತಾತ್ತ್ವಿಕ ದೃಷ್ಟಿಗೆ ಅತ್ಯಂತ ಸಮೀಪರಾಗಿದ್ದಾರೆ ಎಂದು ಧಾರಾಳವಾಗಿ ಹೇಳಬಹುದು. ಏಕೆಂದರೆ ಅವರು ಯಾವುದೇ ತಾತ್ತ್ವಿಕ ಅಭಿಪ್ರಾಯಕ್ಕೆ ಅಂಟಿಕೊಂಡವರಲ್ಲ. ತಮ್ಮ ವೈವಿಧ್ಯ ಮಯವಾದ ಆಧ್ಯಾತ್ಮಿಕ ದರ್ಶನಗಳು ಮತ್ತು ಅವುಗಳ ಫಲಶ್ರುತಿ ಯಾದ ಬೌದ್ಧಿಕ ಪರಿಪಕ್ವತೆಯಿಂದ ಅವರು ಎಲ್ಲ ರೀತಿಯ ತಾತ್ತ್ವಿಕ ಪ್ರಭೇದಗಳನ್ನೂ ಒಂದು ಸಮಾನ ಭೂಮಿಕೆಯಲ್ಲಿ ಒಗ್ಗೂಡುವಂತೆ ಮಾಡಿದರು. ಹಾಗೆಯೇ ಅವುಗಳಲ್ಲಿ ಪ್ರತಿಯೊಂದರ ಮೇಲೆಯೂ ತಮ್ಮ ಅನುಭವದ ಅಧಿಕೃತ ಮುದ್ರೆಯನ್ನು ಪ್ರತಿಷ್ಠಾಪಿಸಿದರು.

ಶ್ರೀರಾಮಕೃಷ್ಣರ ಅಭಿಪ್ರಾಯದಂತೆ, ಶಾಸ್ತ್ರಗ್ರಂಥಗಳಲ್ಲಿ ಕಾಣಬರುವ ವಿವಿಧ ವಾದಗಳೆಲ್ಲವೂ ಸತ್ಯತತ್ತ್ವದ ವಿವಿಧ ಅಭಿವ್ಯಕ್ತಿಗಳು ಮಾತ್ರ. ಈ ಅಭಿಪ್ರಾಯಗಳು ವೈವಿಧ್ಯಮಯ ವಾಗಿದ್ದರೂ, ಅವುಗಳ ಮಧ್ಯೆ ಕಲಹದ ಆವಶ್ಯಕತೆಯೇನೂ ಇಲ್ಲ. ಏಕೆಂದರೆ ಆ ತತ್ತ್ವವು ಏಕವೂ ಸಮಾನವೂ ಆಗಿದೆ ಎಂದು ಅವರು ಪ್ರಬಲವಾಗಿ ಪ್ರತಿಪಾದಿಸುತ್ತಾರೆ. ನಮ್ಮ ಈ ಚರ್ಚೆಯಿಂದ ಅದ್ಭುತವಾದ ಸಂಗತಿಯೊಂದು ಮೂಡಿ ಬರುವುದು. ಅದೆಂದರೆ, ಉನ್ನತಸ್ತರದಿಂದ ನೋಡಿದಾಗ ವಿರೋಧಾತ್ಮಕ ವಿಚಾರಗಳು ಕೂಡ ಪ್ರಸಕ್ತವಾಗಬಲ್ಲವು ಮತ್ತು ಯಥಾರ್ಥವಾಗಬಲ್ಲವು ಎನ್ನುವುದು. ಈ ನಿಟ್ಟಿನಿಂದ ನೋಡು ವುದಾದರೆ, ಕೆಲವು ಸಾಂಪ್ರದಾಯಿಕ ತಾತ್ತ್ವಿಕ ಪಂಗಡಗಳು ಮುಂದಿಡುವ **'ಏಕವಾಕ್ಯತಾ'** ಅಥವಾ 'ಶಾಸ್ತ್ರವಾಕ್ಯಗಳ ಏಕರೂಪತೆ'ಯ ವಾದವನ್ನು ಶ್ರೀರಾಮಕೃಷ್ಣರು ಒಪ್ಪುವುದಿಲ್ಲ ಎಂದೆನಿಸುತ್ತದೆ. ಶಾಸ್ತ್ರಗ್ರಂಥಗಳ ತಾತ್ಪರ್ಯವು ಒಂದೇ ಅಭಿಪ್ರಾಯ ಅಥವಾ ನಿಷ್ಕರ್ಷೆ ಎನ್ನುವ ವಾದ ಅದು. ಈ ವಿಚಾರದಲ್ಲಿ ಅವರ ದೃಷ್ಟಿಕೋನವು ವಿಶ್ವಾತ್ಮಕವಾದುದು ಮತ್ತು ಎಲ್ಲವನ್ನೂ, ಎಲ್ಲರನ್ನೂ ತಬ್ಬಿಕೊಳ್ಳುವಂಥದ್ದು. ಇದೇ ಪ್ರಾಚೀನ ಶಾಸ್ತ್ರ ಗ್ರಂಥಗಳ ನೈಜ ಆಶಯ ಮತ್ತು ಗುರಿಯೂ ಆಗಿತ್ತು ಎಂಬುದು ನಿಸ್ಸಂದೇಹ.

**ಉಪಸಂಹಾರ:** ವೇದಕಾಲದ ನಂತರ ಉಗಮಿಸಿದ ಧರ್ಮ ಗ್ರಂಥಗಳು ಅವತಾರ ತತ್ತ್ವವನ್ನು ಉಲ್ಲೇಖಿಸುತ್ತವೆ. ಅವುಗಳಲ್ಲಿ ವಿವರಿಸಿರುವ ಅವತಾರದ ಎಲ್ಲ ಲಕ್ಷಣಗಳೂ ಶ್ರೀರಾಮಕೃಷ್ಣರ ವ್ಯಕ್ತಿತ್ವದಲ್ಲಿ ಆದರ್ಶರೂಪದಲ್ಲಿ ಒಡಮೂಡಿರುವುದನ್ನು ಕಾಣಬಹುದು. ಈ ದೃಷ್ಟಿಯಲ್ಲಿಯೂ ಅವರು ಶಾಸ್ತ್ರದ ವಿಚಾರಗಳಿಗೆ ಅಧಿಕೃತತೆಯನ್ನು ತಂದುಕೊಟ್ಟ ಯುಗಪುರುಷರಾಗಿದ್ದಾರೆ. ಇದಲ್ಲದೆ, ಅವರ ಸಾಧನಾಗಾಥೆಯಂತೂ ಭಾರತದ ಆಧ್ಯಾತ್ಮಿಕ ಇತಿಹಾಸದಲ್ಲಿಯೇ ಅತ್ಯಂತ ಮನೋಜ್ಞವೂ, ನಿಸ್ಸೀಮವೂ ಆದದ್ದು. ಅವರು ಋಗ್ವೇದದ **'ಏಕಂ ಸತ್ ವಿಪ್ರಾ ಬಹುಧಾ ವದಂತಿ'** – 'ಸತ್ಯ ಒಂದೇ, ತಿಳಿದವರು ಅದನ್ನು ವಿವಿಧ ಹೆಸರುಗಳಿಂದ ಕರೆಯುತ್ತಾರೆ' ಎನ್ನುವ ಉದಾರ ಭಾವನೆಯ ಜೀವಂತಮೂರ್ತಿಯಾಗಿದ್ದರು. ಹಾಗೆಂದೇ, ಮೇಲ್ನೋಟಕ್ಕೆ ಪರಸ್ಪರ ವಿರುದ್ಧ ದಿಕ್ಕುಗಳನ್ನು ತಳೆಯುವ ಸಾಧನಾ ಮಾರ್ಗಗಳನ್ನು ತಮ್ಮ ಜೀವನದಲ್ಲಿ ಅನುಷ್ಠಾನ ಮಾಡಿ, ಅವೆಲ್ಲವೂ ಒಬ್ಬನೇ ಭಗವಂತನ ಕಡೆಗೆ ಹೋಗುವ ವಿವಿಧ ದಾರಿಗಳು ಎಂದು ತೋರಿಸಿಕೊಟ್ಟರು. ಈ ನಿಟ್ಟಿನಲ್ಲಿ ಅವರ ಸಾಧನೆಯೂ ಶಾಸ್ತ್ರಸಮ್ಮತವಾಗಿಯೇ ಇದೆ. ಇದಲ್ಲದೆ, ಅವರ ವ್ಯಕ್ತಿತ್ವ ಮತ್ತು ಉಪದೇಶಗಳೂ ಕೂಡ ಶಾಸ್ತ್ರಗಳ ಬೋಧನೆಗೆ ಅನುಗುಣವಾಗಿಯೇ ಇವೆ ಎಂದು ಹೇಳಬಹುದು.

ಕೂಲಂಕಷವಾಗಿ ನೋಡಿದಾಗ ಶ್ರೀರಾಮಕೃಷ್ಣರು, ಉಪನಿ ಷತ್ತುಗಳು ಪ್ರತಿಪಾದಿಸುವ ಜ್ಞಾನಿಯ ಎಲ್ಲ ಲಕ್ಷಣಗಳನ್ನೂ ತಮ್ಮ ಜೀವನದಲ್ಲಿ ಪ್ರಕಟಪಡಿಸುತ್ತಾರೆ. ಹಾಗೆಯೇ ಭಗವದ್ಗೀತೆಯು ಉಲ್ಲೇಖಿಸುವ **ಸ್ಥಿತಪ್ರಜ್ಞ, ಭಕ್ತ, ಜ್ಞಾನಿ** ಮತ್ತು **ಗುಣಾತೀತನ** ಲಕ್ಷಣಗಳನ್ನೂ ತಮ್ಮಲ್ಲಿ ಪರಿಪೂರ್ಣವಾಗಿ ತೋರ್ಪಡಿಸುತ್ತಾರೆ. ಹಾಗೆಯೇ ಶ್ರೀಕೃಷ್ಣನು ಗೀತೆಯಲ್ಲಿ ಬೋಧಿಸುವ ಕರ್ಮ, ಭಕ್ತಿ, ಜ್ಞಾನ ಮತ್ತು ಧ್ಯಾನ ಯೋಗಗಳ ಸಮನ್ವಯಮೂರ್ತಿಯಾಗಿಯೂ ಕಂಗೊಳಿಸುತ್ತಾರೆ. ಇದಲ್ಲದೆ, ಶ್ರೀಮದ್ಭಾಗವತವು ಎತ್ತಿಹಿಡಿಯುವ ಅತ್ಯುತ್ಕೃಷ್ಟ ಭಕ್ತಿತತ್ತ್ವಕ್ಕೆ ಆದರ್ಶ ನಿದರ್ಶನವಾಗಿದ್ದಾರೆ. ಈ ಎಲ್ಲ ಧರ್ಮಗ್ರಂಥಗಳಲ್ಲಿ ಕಾಣಬರುವ ವಿಚಾರಗಳಲ್ಲಿ ಮತ್ತು ಶ್ರೀರಾಮಕೃಷ್ಣರ ಬೋಧನೆಗಳಲ್ಲಿ ಅನೇಕ ಸಮಾನ ಅಂಶಗಳು ಇರುವುದನ್ನು ಸುಲಭವಾಗಿ ಗಮನಿಸಬಹುದು.

ಇನ್ನೂ ಗಂಭೀರವಾಗಿ ವಿಚಾರ ಮಾಡಿದಾಗ, ಶ್ರೀರಾಮಕೃಷ್ಣರ ವಿಶ್ವಾತ್ಮಕ ಉದಾರ ಭಾವನೆಯ ಬೆಳಕಿನಲ್ಲಿ ಶಾಸ್ತ್ರಗ್ರಂಥಗಳನ್ನು ಅಧ್ಯಯನ ಮಾಡಿದಾಗ ಮಾತ್ರವೇ, ಅವುಗಳ ನೈಜ ತತ್ತ್ವವು ಸರಿಯಾಗಿ ತಿಳಿಯುತ್ತದೆ ಎನ್ನುವುದು ಗೋಚರವಾಗದೆ ಇರದು. ಇಲ್ಲದಿದ್ದರೆ, ಆ ಪವಿತ್ರ ಗ್ರಂಥಗಳ ಭಾಗಶಃ ಅಭಿಪ್ರಾಯವಷ್ಟೇ ನಮ್ಮ ಸಂಕುಚಿತ ಬುದ್ಧಿಗೆ ಅರಿವಾಗಲು ಸಾಧ್ಯ.

ಒಟ್ಟಿನಲ್ಲಿ, ಧರ್ಮಗ್ರಂಥಗಳು ಹಿಂದೂ ಶ್ರದ್ಧಾಳುಗಳ ಒಟ್ಟಾರೆ ಸಮಷ್ಟಿ ಪ್ರಜ್ಞೆಯನ್ನು ಅಭಿವ್ಯಕ್ತಪಡಿಸುತ್ತವೆ. ಶ್ರೀರಾಮಕೃಷ್ಣರ ವೈಶಿಷ್ಟ್ಯವೆಂದರೆ, ಅವರು ತಮ್ಮ ಜೀವಮಾನದಲ್ಲಿ ಅಪಾರವಾದ ಆಧ್ಯಾತ್ಮಿಕ ಶಕ್ತಿಯನ್ನು ಪ್ರದರ್ಶಿಸಿದರು. ಆಮೂಲಕ, ಎಲ್ಲ ಶಾಸ್ತ್ರ ಗ್ರಂಥಗಳ ಸತ್ತ್ವಸ್ವರೂಪರಾದರು. ರೋಮಾ ರೋಲಾ ಹೇಳು ವಂತೆ, "ಮೂವತ್ತು ಕೋಟಿ ಜನರ, ಎರಡು ಸಾವಿರ ವರ್ಷಗಳ ಆಧ್ಯಾತ್ಮಿಕ ಜೀವನದ ಸುಸಂಪನ್ನ ಮೂರ್ತಿಯಾದರು."

## ನೇತಿ ನೇತಿ... ನೇತಿ ನೇತಿ...

**ಗೆಳೆಯರೊಬ್ಬರ ಕೂಡಿ ಹಿರಿಯರೊಬ್ಬರ ಮನೆಗೆ ಹೋಗಿದ್ದೆಯೊಮ್ಮೆ.**
**ಕರೆಗಂಟೆಯ ಕೇಳಿ ಸಡಗರದಿ ಹೊರಬಂದು ಕದವ ತೆರೆದು**
**ಒಳಗೆ ಕರೆದು, ಕೂರಿಸಿದರೆಮ್ಮನ್ನು ನಡುಮನೆಯ ಒಳಗೆ**
**ಬಿಡದೆ ಕುಳಿತರು ನಮ್ಮ ಮನದ ಒಳಗೆ. ಸಹಧರ್ಮಿಣಿಯ ಕರೆಯೆ;**
**ತಾಯಿ ಹೊರಬಂದರು ಭಗವತಿಯೆ ಬಂದಂತೆ ಬೆಳಕ ಹರಡಿ !**
**ಆ ಮಾತು, ಈ ಮಾತು, ಉಪಹಾರ, ಉಪಚಾರ,**
**ಉಭಯ ಕುಶಲೋಪರಿಯಲಿ ತೇಲುತಿರಲು**
**ಮನಗಳೆರಡರ ತೆರದಿ ಮನೆಯು 'ಮಡಿ'ಯಾಗಿರಲು**
**ಒಳಗೆ ಹೊರಗೆ;**
**ಕೌತುಕದಿ ಕೇಳಿದೆನು ಎಷ್ಟು ವರುಷಗಳಾಯ್ತು ಮನೆಯ ಕಟ್ಟಿ ?**
**ಮನೆ 'ನಮ್ಮದಲ್ಲ' ಬಾಡಿಗೆಯದೆನಲು**
**ಮನೆಯೇಕೆ ಕಟ್ಟಿಲ್ಲ ? 'ಹಣದ ಕೊರತೆಯೆ' ಎಂದು**
**ಬಿಡದೆ ಬೆಸಸಿದೆನು ಬೆರಗ ಬೆರಸಿ !**
**ಕೊರತೆ ಅನಿತೇನಿಲ್ಲ ; ಪ್ರಾಧ್ಯಾಪಕ ವೃತ್ತಿಯಂ ನಿವೃತ್ತರಾಗಿಹೆವು,**
**'ಗಳಿಸಿ' 'ಬಳಸಿ' 'ಉಳಿಸಿದುದ' ಬ್ಯಾಂಕಿನಲ್ಲಿರಿಸಿಹೆವು.**
**'ನಾವಳಿದ ಮೇಲೆ' ಧರ್ಮಸಂಸ್ಥೆಗಳಿಗೆ, ಹಂಚಿ 'ಉಯಿಲು' ಬರೆಸಿ;**
**ಅಲ್ಲಿರಲು 'ನಮ್ಮ ಮನೆ' ಸುಮ್ಮನೇಕಿಲ್ಲಿ 'ಮನೆ' ?**
**ಎಂಬುದು ನಮ್ಮ ರೀತಿ.**
**'ಗಳಿಸಿ' 'ಉಳಿಸಿ' ಹೋದರೆ ಮತ್ತೆ ಬರಬೇಕೆಂಬುದು ನಮ್ಮ ನೀತಿ**
**ಬೆದಕಿ ನೋಡಲು ಬದುಕೆ ನೇತಿ ನೇತಿ... ಎಲ್ಲಾ ನೇತಿ ನೇತಿ...**

*– ಡಿ. ಕೆ. ಈರೇಗೌಡ*

# ರಾಷ್ಟ್ರ ಜಾಗೃತಿಯ ಹರಿಕಾರ ಸ್ವಾಮಿ ವಿವೇಕಾನಂದ

ಸ್ವಾಮಿ ಭಜನಾನಂದ

*(ಹಿಂದಿನ ಸಂಚಿಕೆಯಿಂದ)*

*(ಸ್ವಾಮಿ ವಿವೇಕಾನಂದರು ಭಾರತ ರಾಷ್ಟ್ರೀಯ ಜಾಗೃತಿಗೆ ನೀಡಿದ ಎರಡು ಕೊಡುಗೆಗಳನ್ನು ಈಗಾಗಲೇ ಚರ್ಚಿಸಲಾಗಿದೆ. ಅವೆಂದರೆ, ೧. ರಾಷ್ಟ್ರೀಯ ಪ್ರಜ್ಞೆಯ ಸೃಷ್ಟಿ. ೨. ರಾಷ್ಟ್ರೀಯ ಜಾಗೃತಿಯ ಭಾವನೆ.)*

**೩. ಭಾರತವನ್ನು ಒಂದು ಧ್ಯೇಯೋದ್ದೇಶವುಳ್ಳ ದೇಶವನ್ನಾಗಿ ಪರಿವರ್ತಿಸುವುದು:** ೧೯ನೆಯ ಶತಮಾನದಲ್ಲಿ ಭಾರತದ ಜಾಗೃತಿಗಾಗಿ ಸ್ವಾಮಿ ವಿವೇಕಾನಂದರ ಕೊಡುಗೆಗಳನ್ನು ನಾವು ಚರ್ಚಿಸುತ್ತಿದ್ದೇವೆ. ಪಾಶ್ಚಾತ್ಯ ಸಂಸ್ಕೃತಿಯ ಆಕ್ರಮಣದ ವಿರುದ್ಧದ ಪ್ರತಿಕ್ರಿಯೆಯು ಹೇಗೆ ಭಾರತೀಯ ಸಂಸ್ಕೃತಿಯ ಪುನರುಜ್ಜೀವನ ಮತ್ತು ಸಮಾಜಸುಧಾರಣಾ ಆಂದೋಲನಗಳ ರೂಪವನ್ನು ತಾಳಿತು ಎನ್ನುವುದನ್ನೂ ನಾವು ನೋಡಿದ್ದೇವೆ. ಇಂಥ ಕಾಲಘಟ್ಟದಲ್ಲಿ ಸ್ವಾಮಿ ವಿವೇಕಾನಂದರ ಅವತರಣವಾಯಿತು. ಅವರು ರಾಷ್ಟ್ರೀಯ ಚೇತನದ ಹರಿಕಾರರಾದರು ಮತ್ತು ಎಲ್ಲ ರೀತಿಯ ರಾಷ್ಟ್ರಜೀವನದ ಚಟುವಟಿಕೆಗಳಿಗೆ ಆಧ್ಯಾತ್ಮಿಕ ಆಯಾಮವನ್ನು ನೀಡಿದರು. ಈ ಆಧ್ಯಾತ್ಮಿಕ ಜಾಗೃತಿಯನ್ನು ಅವರು ಭಾರತದ ಮಟ್ಟಿಗೆ ಮಾತ್ರ ಸೀಮಿತಗೊಳಿಸಲಿಲ್ಲ.

ಸ್ವಾಮೀಜಿ ನಾಲ್ಕು ವರ್ಷಗಳ ಕಾಲ ಪಾಶ್ಚಾತ್ಯ ದೇಶಗಳಲ್ಲಿ ನೆಲೆಸಿದ್ದರು. ಪಾಶ್ಚಾತ್ಯ ಜನರಿಗೆ ಆಧ್ಯಾತ್ಮಿಕ ಸಹಾಯದ ಗಂಭೀರ ಆವಶ್ಯಕತೆಯಿದೆಯೆಂಬುದು ಅವರಿಗೆ ತಿಳಿದಿತ್ತು. ಪಾಶ್ಚಾತ್ಯರು ತಮ್ಮ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಬಹುಮಟ್ಟಿಗೆ ಪರಿಹರಿಸಿಕೊಂಡಿದ್ದರೂ, ಜೀವನದ ಅರ್ಥಹೀನತೆ ಮತ್ತು ಶೂನ್ಯತೆಗಳಂತಹ ಅನೇಕ ರೀತಿಯ ಮನೋವೈಜ್ಞಾನಿಕ ಮತ್ತು ಮಾನವ–ಅಸ್ತಿತ್ವಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಎದುರಿಸುತ್ತಿದ್ದರು. ಅದಕ್ಕೆ ಪರಿಹಾರ ಆಧ್ಯಾತ್ಮಿಕತೆಯಿಂದ ಮಾತ್ರ ಸಾಧ್ಯ. ಆಗ ಪಾಶ್ಚಾತ್ಯರಲ್ಲಿ ಪ್ರಚಲಿತವಿದ್ದ ಅನೇಕ ಧಾರ್ಮಿಕ ಸಂಸ್ಥೆಗಳು ಬಹಳ ಸೀಮಿತವಾದ ದೃಷ್ಟಿಕೋನ ಹಾಗೂ ಭಯಪೂರಿತ ನಂಬಿಕೆಗಳನ್ನೇ ಆಧಾರವಾಗಿ ಇಟ್ಟುಕೊಂಡಿದ್ದವು. ಇದರಿಂದ ಪಾಶ್ಚಾತ್ಯ ಜನರಿಗೆ ಆವಶ್ಯಕತೆಯಿರುವ ಆಧ್ಯಾತ್ಮಿಕ ಪರಿಹಾರವನ್ನು ನೀಡುವ ಸಾಮರ್ಥ್ಯ ಅವುಗಳಿಗೆ ಇರಲಿಲ್ಲ. ಮತೀಯ ಭಾವನೆಗಳಿಂದ ದೂರವಾದ ಚಿರಂತನ ವಿಶ್ವವ್ಯಾಪಕ ಸತ್ಯಗಳು ಹಾಗೂ ನೇರ ವೈಯಕ್ತಿಕ ಅನುಭವಗಳ ಮೇಲೆ ಆಧರಿಸಿದ ಭಾರತೀಯ ಆಧ್ಯಾತ್ಮಿಕತೆ ಮಾತ್ರವೇ ಪಾಶ್ಚಾತ್ಯ ಜನರ ಆಧ್ಯಾತ್ಮಿಕ ಅಗತ್ಯತೆಗಳನ್ನು ಪೂರೈಸಬಲ್ಲುದು. ಇದಲ್ಲದೆ, ಭಾರತೀಯ ಧಾರ್ಮಿಕ ಸಾಮರಸ್ಯದ ಸಂದೇಶದ ಆವಶ್ಯಕತೆಯೂ ಪಾಶ್ಚಾತ್ಯ ಜಗತ್ತಿಗೆ ಅವಶ್ಯವಾಗಿದೆ.

ಜಾಗತಿಕ ಸಂಸ್ಕೃತಿಯಲ್ಲಿ ಮತ್ತು ವಿಶ್ವ ಸಮುದಾಯದಲ್ಲಿ ಭಾರತವು ಒಂದು ವಿಶಿಷ್ಟವಾದ ಕರ್ತವ್ಯವನ್ನು ನಿಭಾಯಿಸಬೇಕಾಗಿದೆ; ಒಂದು ಮಹತ್ವವಾದ ಪಾತ್ರವನ್ನು ತಳೆಯಬೇಕಾಗಿದೆ ಎನ್ನುವುದೇ ಇದರರ್ಥ. ಈ ರೀತಿ, ಸ್ವಾಮೀಜಿ ಭಾರತವನ್ನು ತನ್ನದೇ ಆದ ಧ್ಯೇಯೋದ್ದೇಶವುಳ್ಳ ರಾಷ್ಟ್ರವನ್ನಾಗಿ ಪರಿವರ್ತಿಸಿದರು. ಹಾಗೆ ನೋಡಿದರೆ, ಸ್ವಾಮೀಜಿ ಇನ್ನೂ ಒಂದು ಹೆಜ್ಜೆ ಮುಂದೆ ಹೋದರು. ಭಾರತವು ತನ್ನ ಆಧ್ಯಾತ್ಮಿಕತೆಯಿಂದ ಇಡೀ ಪ್ರಪಂಚವನ್ನು ಗೆಲ್ಲಬೇಕೆಂದು ಅವರು ಆಶಿಸಿದರು. ಅವರ ವಿದ್ಯುತ್ಪ್ರಭೆಯಂಥ ಮಾತುಗಳನ್ನು ಹೀಗೆ ಉಲ್ಲೇಖಿಸಬಹುದು: "ಭಾರತವು ಮತ್ತೊಮ್ಮೆ ಇಡೀ ಜಗತ್ತನ್ನು ಗೆಲ್ಲಬೇಕು. ಇದೇ ನನ್ನ ಜೀವನದ ಕನಸು... ನಮ್ಮ ಮುಂದಿರುವ ಮಹಾನ್ ಆದರ್ಶವೇ ಇದು. ಮತ್ತು ಎಲ್ಲರೂ ಇದಕ್ಕೆ ತಯಾರಾಗಿರಬೇಕು... ಆ ಧ್ಯೇಯವೇ ಭಾರತದಿಂದ ಇಡೀ ಜಗತ್ತಿನ ವಿಜಯ – ಈ ಧ್ಯೇಯವನ್ನು ಎಳ್ಳಷ್ಟೂ ಕಡಮೆ ಮಾಡಬಾರದು. ನಾವೆಲ್ಲರೂ ಇದಕ್ಕೆ ಸನ್ನದ್ಧರಾಗಬೇಕು. ನಮ್ಮಲ್ಲಿರುವ ಪ್ರತಿಯೊಂದು ನರವನ್ನೂ ಇದಕ್ಕೇ ಪ್ರಯತ್ನಿಸುವಂತೆ ಮಾಡಬೇಕು. ಭಾರತವೇ ಎದ್ದೇಳು. ನಿನ್ನ ಆಧ್ಯಾತ್ಮಿಕತೆಯಿಂದ ಇಡೀ ಪ್ರಪಂಚವನ್ನೇ ಜಯಿಸು."

**೪. ಭಾರತೀಯರ ಹೃದಯಗಳಲ್ಲಿ ರಾಷ್ಟ್ರೀಯ ಅಭಿಮಾನವನ್ನು ಮೂಡಿಸಿದ್ದು:** ೧೨ನೆಯ ಶತಮಾನದಿಂದಲೂ ಭಾರತದ ರಾಜಕೀಯ ಇತಿಹಾಸವು, ವಿದೇಶೀ ಗುಂಪುಗಳ ಆಕ್ರಮಣಗಳು,

ಸೋಲುಗಳು ಮತ್ತು ಪರಕೀಯರ ನಿರಂತರ ದಾಸ್ಯದ ಕಥನವೆಂದೇ ಹೇಳಬೇಕು. ಇದರ ಫಲವಾಗಿ ಭಾರತೀಯ ಮಾನಸವು ಒಂದು ಬಗೆಯ ಸೋಲಿನ ಭಾವನೆ, ಕೀಳರಿಮೆ, ಆತ್ಮವಿಶ್ವಾಸದ ಕೊರತೆ, ಅಸಹಾಯಕತೆ ಮತ್ತು ಸಾಮಾಜಿಕ ಜಡತೆಗಳೆಂಬ ನಕಾರಾತ್ಮಕ ಗುಣಗಳಿಂದ ತುಂಬಿಹೋಗಿತ್ತು. ವಿದ್ಯಾವಂತ ಭಾರತೀಯರು ತಮ್ಮ ಸ್ವಂತ ದೇಶದ ಬಗ್ಗೆ, ಅದರ ಸಂಸ್ಕೃತಿಯ ಬಗ್ಗೆ ಕೀಳುಭಾವನೆಯನ್ನು ಬೆಳೆಸಿಕೊಂಡು, ತಮ್ಮ ಪಾಶ್ಚಾತ್ಯ ದಣಿಗಳನ್ನು ಪ್ರಶಂಸೆಯ ದೃಷ್ಟಿಯಿಂದ ಕಾಣುತ್ತಿದ್ದರು.

ಈ ಕಾಲದಲ್ಲಿ ಸ್ವಾಮಿ ವಿವೇಕಾನಂದರು ಉಚ್ಚಸ್ವರದಲ್ಲಿ ಭಾರತದ ಪ್ರಾಚೀನ ಆಧ್ಯಾತ್ಮಿಕ ಸಂಸ್ಕೃತಿಯ ವೈಭವವನ್ನು ಜಗತ್ತಿಗೆಲ್ಲ ಸಾರಿದರು. ಇದರಿಂದ ಭಾರತೀಯರಿಗೆ ತಾವು ಅಭಿಮಾನಪಡುವ ಸಂಗತಿಯೊಂದು ದೊರಕಿದಂತಾಯಿತು. ಭಾರತೀಯರು ಪಾಶ್ಚಾತ್ಯ ಜನಾಂಗಕ್ಕಿಂತ ಆಧ್ಯಾತ್ಮಿಕವಾಗಿ ಶ್ರೇಷ್ಠರೆಂದು ಸ್ವಾಮೀಜಿ ತಮ್ಮ ಅಪೂರ್ವ ವಾಗ್ವೈಖರಿಯಿಂದ ಖಚಿತಪಡಿಸಿದ್ದು, ಭಾರತೀಯರ ಸಮಷ್ಟಿ ಪ್ರಜ್ಞೆಯಲ್ಲಿ ಆಳವಾಗಿ ಬೇರೂರಿತು. ಇದರ ಫಲವಾಗಿ, ತಾವು ಶ್ರೇಷ್ಠರು ಮತ್ತು ವಿಜಯಶಾಲಿಗಳೆಂಬ ಭಾವನೆ ವಿದ್ಯಾವಂತ ಭಾರತೀಯರಲ್ಲಿ ಈಗಲೂ ಮನೆಮಾಡಿದೆ. ಸ್ವಾಮೀಜಿ ನೀಡಿದ, "ಏಳು ಭಾರತವೇ. ನಿನ್ನ ಆಧ್ಯಾತ್ಮಿಕತೆಯಿಂದ ಇಡೀ ಜಗತ್ತನ್ನೇ ಜಯಿಸು" ಎಂಬ ಶಕ್ತಿಶಾಲಿ ಉದ್ಘೋಷವು, ಬ್ರಿಟಿಷರ ಕೈಲಿ ಸೋಲುಂಡು ದಬ್ಬಾಳಿಕೆಗೆ ಒಳಪಟ್ಟಿದ್ದ ದೇಶಬಾಂಧವರಿಗೆ ನೈತಿಕ ಬಲವರ್ಧಕವಾಗಿ ಪರಿಣಮಿಸಿತು. ವ್ಯಕ್ತಿಯೊಬ್ಬನು ತಾನು ಯಾವತ್ತೂ ಇತರರ ಮೇಲೆ ಅವಲಂಬಿತನಾಗಿದ್ದೇನೆ ಮತ್ತು ಜೀವನದಲ್ಲಿ ತಾನು ಇತರರಿಗೆ ನೀಡುವ ಕೊಡುಗೆಯೇನೂ ಇಲ್ಲ ಎಂದು ಭಾವಿಸುತ್ತಾನೆ ಅಂದುಕೊಳ್ಳಿ. ಆಗ ಅವನು ತನ್ನ ಜೀವನ ಅರ್ಥಹೀನ ಮತ್ತು ಉದ್ದೇಶರಹಿತ ಎಂದುಕೊಳ್ಳುತ್ತಾನೆ. ದೇಶಗಳ ವಿಷಯದಲ್ಲಿಯೂ ಇದೇ ಸಂಭವಿಸುತ್ತದೆ. ಭಾರತವು ಇಡೀ ಪ್ರಪಂಚದ ಹಿತಕ್ಕಾಗಿ ಮಾಡಬೇಕಾದ ಕಾರ್ಯವೊಂದಿದೆ ಎಂದು ಸ್ವಾಮೀಜಿ ದೃಢವಾಗಿ ಪ್ರತಿಪಾದಿಸಿದರು. ಅದಕ್ಕಾಗಿ ಭಾರತವು ಜಾಗತಿಕ ಸಂಸ್ಕೃತಿಗೆ ತನ್ನ ಆಧ್ಯಾತ್ಮಿಕ ಸಂಪತ್ತನ್ನು ಕೊಡುಗೆಯಾಗಿ ನೀಡಬೇಕಾಗಿದೆ. ಹಾಗೂ ಅಧಃಪತನಕ್ಕೆ ಇಳಿಯುತ್ತಿರುವ ಪಾಶ್ಚಾತ್ಯ ನಾಗರಿಕತೆಗೆ – ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕೆ – ಭಾರತೀಯ ಆಧ್ಯಾತ್ಮಿಕ ಸಿಂಚನ ಅತ್ಯವಶ್ಯವಾಗಿದೆ. ಸ್ವಾಮೀಜಿಯ ಈ ವಿಚಾರಧಾರೆಯು ಭಾರತೀಯರ ಮನಸ್ಸಿನಲ್ಲಿ ಘನತೆ ಮತ್ತು ಅಭಿಮಾನದ ಸಂವೇದನೆಯನ್ನು ಮೂಡಿಸಿತು.

ಭಾರತೀಯ ರಾಷ್ಟ್ರೀಯ ಜೀವಿತಕ್ಕೆ ಸ್ವಾಮೀಜಿಯವರ ಅಪೂರ್ವ ಕೊಡುಗೆಯನ್ನು ಜವಹರಲಾಲ್ ನೆಹರು ಅವರು ತಮ್ಮ *Discovery of India* ಗ್ರಂಥದಲ್ಲಿ ಹೀಗೆ ಸಂಗ್ರಹಿಸುತ್ತಾರೆ: "ಭೂತಕಾಲದಲ್ಲಿ ಬೇರುಬಿಟ್ಟು, (ಪ್ರಾಚೀನ) ಭಾರತದ ಘನತೆಯಲ್ಲಿ ಪೂರ್ಣ ಅಭಿಮಾನವನ್ನು ತಳೆದಿದ್ದ ಸ್ವಾಮಿ ವಿವೇಕಾನಂದರು, ಬಾಳಿನ ಸಮಸ್ಯೆಗಳ ಬಗೆಗಿನ ತಮ್ಮ ಧೋರಣೆಯಲ್ಲಿ ಆಧುನಿಕರಾಗಿಯೇ ಇದ್ದರು. ಮತ್ತು ಭಾರತದ ಪ್ರಾಚೀನತೆ ಮತ್ತು ವರ್ತಮಾನಗಳ ನಡುವಣ ಸೇತುವೆಯಂತೆ ಇದ್ದರು... ಖಿನ್ನಗೊಂಡ ಮತ್ತು ನೀತಿರಹಿತವಾಗಿದ್ದ ಹಿಂದೂ ಮಾನಸಕ್ಕೆ ಅವರು ಸಂಜೀವಿನಿಯಂತೆ ಮೂಡಿಬಂದು, ಅದಕ್ಕೆ ಸ್ವಾವಲಂಬನೆಯನ್ನು ನೀಡುವುದರ ಜೊತೆಜೊತೆಗೆ, ಪ್ರಾಚೀನತೆಯೊಡನೆ ಅದರ ಸಂಬಂಧದ ಬೇರುಗಳನ್ನೂ ಬಲಪಡಿಸಿದರು."

**೫. ಕೆಳವರ್ಗದ ಜನರ ಉದ್ಧಾರ:** ೧೯ನೆಯ ಶತಮಾನದಲ್ಲಿ ಕಂಡುಬಂದ ಭಾರತೀಯ ರಾಷ್ಟ್ರೀಯ ಜಾಗೃತಿಗೆ ಸ್ವಾಮಿ ವಿವೇಕಾನಂದರು ನೀಡಿದ ಇನ್ನೊಂದು ಮಹತ್ವದ ಕೊಡುಗೆಯಿದೆ. ಅದೆಂದರೆ, ಭಾರತದ ಜನಸಾಮಾನ್ಯರ ದಯನೀಯ ಸ್ಥಿತಿಯ ಮೇಲೆ ಜನರ ಗಮನವನ್ನು ಸೆಳೆದಿದ್ದು. ಸ್ವಾಮೀಜಿ ಅವರನ್ನು ಗುರುತಿಸಲು *downtrodden* – ತುಳಿಯಲ್ಪಟ್ಟವರು ಎಂಬ ಪದವನ್ನು ಬಳಸಿದರು. ಅದರ ಹಿಂದಿ ಅನುವಾದವೇ ಇಂದು ಪ್ರಸಿದ್ಧವಾಗಿರುವ 'ದಲಿತ' ಎನ್ನುವ ಪದ. ಆದಿವಾಸಿಗಳಲ್ಲದ ಕೆಳವರ್ಗದ ಜನರನ್ನು ಕರೆಯಲು ಇದನ್ನು ಇಂದು ಎಲ್ಲ ಕಡೆ ಉಪಯೋಗಿಸಲಾಗುತ್ತಿದೆ. ಭಾರತದ ಅಧಃಪತನದ ಮುಖ್ಯ ಕಾರಣ ಜನಸಾಮಾನ್ಯರನ್ನು ಕಡೆಗಣಿಸಿದ್ದು ಎಂದು ಎತ್ತಿತೋರಿಸಿದ ಮೊಟ್ಟಮೊದಲ ರಾಷ್ಟ್ರೀಯ ನಾಯಕರು ಸ್ವಾಮಿ ವಿವೇಕಾನಂದರು. ಅಂದಿನ ಬಹುತೇಕ ಸಮಾಜಸುಧಾರಕರು ಭಾರತೀಯ ಸಮಾಜದ ಹಿಂದುಳಿಯುವಿಕೆಗೆ ಹಿಂದೂಧರ್ಮವೇ ಕಾರಣವೆಂದು ದೂರುತ್ತಿದ್ದರು. ಇದಲ್ಲದೆ ತಮ್ಮ ಇಡೀ ಗಮನವನ್ನು ವಿಧವೆಯರ ಮರುವಿವಾಹ, ವಿಗ್ರಹಾರಾಧನೆಯನ್ನು ಖಂಡಿಸುವುದು ಮುಂತಾದವುಗಳಲ್ಲಿಯೇ ತೊಡಗಿಸುತ್ತಿದ್ದರು. ಕೇವಲ ಮಧ್ಯಮ ಮತ್ತು ಉತ್ತಮ ವರ್ಗದ ಜನತೆಯನ್ನು ಮಾತ್ರ ಕಾಡುತ್ತಿದ್ದ ಈ ವಿಷಯಗಳನ್ನು ಕುರಿತು ಸ್ವಾಮೀಜಿ ವಿನೋದವಾಗಿ ಹೇಳುತ್ತಾರೆ, "ಒಂದು ದೇಶದ ಸಮೃದ್ಧಿಯನ್ನು ಅಲ್ಲಿರುವ ವಿಧವೆಯರು ಪಡೆದುಕೊಂಡ ಗಂಡಂದಿರ ಸಂಖ್ಯೆಯ ಮೇಲೆ ಅಳೆಯಬಾರದು" ಎಂದು.

ಭಾರತದ ಅಧಃಪತನಕ್ಕೆ ಕಾರಣವಾದ ಪ್ರಮುಖ ಕಾರಣಗಳಲ್ಲಿ ಒಂದನ್ನು ಎತ್ತಿ ತೋರಿಸುತ್ತ ಸ್ವಾಮೀಜಿ ಹೀಗೆ ನುಡಿಯುತ್ತಾರೆ: "ಜನಸಾಮಾನ್ಯರನ್ನು ಕಡೆಗಣಿಸಿದ್ದು ದೊಡ್ಡದೊಂದು ರಾಷ್ಟ್ರೀಯ ಪಾಪವೆಂದು ನಾನು ಪರಿಗಣಿಸುತ್ತೇನೆ. ಭಾರತದ ಅಧಃಪತನಕ್ಕೆ ಅದೊಂದು ಮುಖ್ಯ ಕಾರಣ. ಭಾರತದಲ್ಲಿನ ಜನಸಾಮಾನ್ಯರಿಗೆ ಮತ್ತೊಮ್ಮೆ ಶಿಕ್ಷಣ ನೀಡಬೇಕು, ಆಹಾರವನ್ನು ಒದಗಿಸಬೇಕು, ಅವರನ್ನು ಚೆನ್ನಾಗಿ ನೋಡಿಕೊಳ್ಳಬೇಕು. ಅಲ್ಲಿಯವರೆಗೆ ಎಷ್ಟರ ಮಟ್ಟಿನ ರಾಜಕೀಯವೂ ಯಾವ ಉಪಯೋಗಕ್ಕೂ ಬರುವುದಿಲ್ಲ. ಅವರು (ಜನಸಾಮಾನ್ಯರು) ನಮ್ಮ ವಿದ್ಯಾಭ್ಯಾಸದ ಖರ್ಚನ್ನು ಭರಿಸುತ್ತಾರೆ, ನಮ್ಮ ದೇವಾಲಯಗಳನ್ನು ಕಟ್ಟುತ್ತಾರೆ. ಆದರೆ ಅದಕ್ಕೆ ಪ್ರತಿಯಾಗಿ ಅವರು ನಮ್ಮಿಂದ ತಿರಸ್ಕಾರವನ್ನಷ್ಟೇ ಪಡೆಯುತ್ತಾರೆ... ನಾವು ಭಾರತದ ಪುನರುಜ್ಜೀವನವನ್ನು ಬಯಸುವುದಾದರೆ, ಮೊದಲು ಅವರಿಗಾಗಿ ಕಾರ್ಯತತ್ಪರರಾಗಬೇಕು."

**೬. ಶಿಕ್ಷಣದ ಮೂಲಕ ಸಾಮಾಜಿಕ ಪರಿವರ್ತನೆ:** ಸ್ವಾಮಿ ವಿವೇಕಾನಂದರಿಗೆ ಹಿಂಸಾತ್ಮಕ ಕ್ರಾಂತಿಯಲ್ಲಿ ನಂಬಿಕೆಯಿರಲಿಲ್ಲ. ಸಮಾಜ ಮತ್ತು ರಾಜಕೀಯದಲ್ಲಿ ಪರಿವರ್ತನೆಯನ್ನು ಉಂಟುಮಾಡುವ ಏಕಮೇವ ಮಾರ್ಗವೆಂದರೆ ರೈತರು ಮತ್ತು ಕಾರ್ಖಾನೆಗಳ ಕೆಲಸಗಾರರ ಹಿಂಸಾತ್ಮಕ ಆಂದೋಳನ ಎಂದು ಮಾರ್ಕ್ಸ್‌ನ ಸಿದ್ಧಾಂತವು ಪ್ರತಿಪಾದಿಸುತ್ತದೆ. ಇದಕ್ಕೆ ವಿರುದ್ಧವಾಗಿ, ಅವಶ್ಯವಿರುವ ಎಲ್ಲ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿವರ್ತನೆಗಳನ್ನು

ಶಿಕ್ಷಣದ ಮೂಲಕ ಕಾರ್ಯಗತಗೊಳಿಸಬಹುದೆಂದು ಸ್ವಾಮೀಜಿ ನಂಬಿದ್ದರು. ಕಳೆದ ಶತಮಾನದ ಅಂತ್ಯಭಾಗದಲ್ಲಿ ರಷ್ಯಾ ಮತ್ತು ಚೀನಾ ದೇಶಗಳಲ್ಲಿ ಮಾರ್ಕ್ಸ್ ಸಿದ್ಧಾಂತವು ವಿಫಲವಾಗಿರುವುದು ಸ್ವಾಮೀಜಿಯವರ ಈ ದೃಷ್ಟಿಕೋನದ ವಾಸ್ತವಿಕತೆಯನ್ನು ಖಾತರಿ ಪಡಿಸಿದೆ. ಸುಮಾರು ನೂರಾಇಪ್ಪತ್ತು ವರ್ಷಗಳ ಹಿಂದೆಯೇ ಅವರು ಹೀಗೆ ಹೇಳಿದ್ದರು: "ಶಿಕ್ಷಣ, ಶಿಕ್ಷಣ, ಶಿಕ್ಷಣ ಮಾತ್ರ! ಯೂರೋಪಿನ ಹಲವಾರು ನಗರಗಳಲ್ಲಿ ಪ್ರಯಾಣ ಮಾಡುತ್ತ, ಅಲ್ಲಿನವರಲ್ಲಿ ಬಡಜನರೂ ಸಾಮಾಜಿಕ ಸೌಲಭ್ಯಗಳನ್ನು ಮತ್ತು ಶಿಕ್ಷಣವನ್ನು ಪಡೆದುಕೊಂಡಿರುವುದನ್ನು ನಾನು ಗಮನಿಸಿದೆ. ಆಗ ನನ್ನ ಮನಸ್ಸಿನಲ್ಲಿ, ನಮ್ಮವರೇ ಆದ ಬಡಜನರ ಸ್ಥಿತಿಯು ನೆನಪಿಗೆ ಬಂದು, ಕಣ್ಣೀರು ಸುರಿಸುತ್ತಿದ್ದೆನು. ಈ ವ್ಯತ್ಯಾಸಕ್ಕೆ ಕಾರಣವಾದರೂ ಏನು? ಶಿಕ್ಷಣವೆಂಬುದೇ ಇದಕ್ಕೆ ನಾನು ಕಂಡುಕೊಂಡ ಉತ್ತರ. ಶಿಕ್ಷಣದ ಮೂಲಕ ಒಬ್ಬ ವ್ಯಕ್ತಿಯಲ್ಲಿ ಆತ್ಮವಿಶ್ವಾಸ ಮೂಡುತ್ತದೆ ಹಾಗೂ ಆ ಆತ್ಮವಿಶ್ವಾಸದ ಮೂಲಕ ಅವರಲ್ಲೇ ಅಡಗಿರುವ ಆತ್ಮಸ್ವರೂಪವಾದ ಬ್ರಹ್ಮಚೈತನ್ಯದ ಜಾಗೃತಿಯಾಗುತ್ತದೆ. ನಮ್ಮ (ಭಾರತೀಯರ) ವಿಷಯದಲ್ಲಿಯಾದರೋ, ಆ ಚೈತನ್ಯವು ನಿಧಾನ ವಾಗಿ ಅಡಗಿಹೋಗುತ್ತಿದೆ."

ಬಂಗಾಳದ ಸಮಾಜಸುಧಾರಕರಲ್ಲಿ ಬಡಜನರ ಬಗ್ಗೆ ಸೇವಾಭಾವನೆಯನ್ನು ಅಲ್ಪಸ್ವಲ್ಪವಾದರೂ ಹೊಂದಿದ್ದವನೆಂದರೆ ಕೇಶವಚಂದ್ರ ಸೇನ್. ಆದರೆ ಅವನಾಗಲಿ ಅಥವಾ ಆ ಕಾಲದ ನಾಯಕರಾಗಲಿ, ಜನಸಾಮಾನ್ಯರ ಶಿಕ್ಷಣವು ಹೇಗೆ ರಾಷ್ಟ್ರೀಯ ಜಾಗೃತಿಯ ಪ್ರಮುಖ ಮಾಧ್ಯಮವಾಗಬಲ್ಲುದು ಎಂದು ಯೋಚಿಸಿರಲೇ ಇಲ್ಲ. ಸ್ವಾಮೀಜಿ ಹೇಳುತ್ತಾರೆ, "ನಾನು ನನ್ನ ಕಣ್ಣಮುಂದೆಯೇ ನೋಡುತ್ತಿದ್ದೇನೆ: ಜನಸಾಮಾನ್ಯರ ಶಿಕ್ಷಣ ಮತ್ತು ಬುದ್ಧಿಮತ್ತೆಯು ಹೆಚ್ಚಿದಂತೆ, ರಾಷ್ಟ್ರವೂ ಅದೇ ಪ್ರಮಾಣದಲ್ಲಿ ಅಭಿವೃದ್ಧಿಯನ್ನು ಹೊಂದುವುದು. ಭಾರತದ ಅಧೋಗತಿಗೆ ಮುಖ್ಯಕಾರಣವೆಂದರೆ ಇಡೀ ವಿದ್ಯಾಭ್ಯಾಸ ಮತ್ತು ಬುದ್ಧಿಮತ್ತೆಯನ್ನು ಪೊಳ್ಳು ಅಹಂಕಾರ ಮತ್ತು ರಾಜವೈಭವದ ಅಧಿಕಾರಶಾಹಿಯನ್ನು ಪ್ರತಿನಿಧಿಸುವ ಕೈಬೆರಳಿನಷ್ಟು ಜನರು ಏಕಸ್ವಾಮ್ಯಗೊಳಿಸಿಕೊಂಡಿರುವುದು. ಮತ್ತೆ ಮೇಲಕ್ಕೆ ಏರಬೇಕಾದರೆ, ಇದೇ ಕ್ರಮದಲ್ಲಿ ನಾವು ಮುಂದುವರೆಯಬೇಕು, ಅದೆಂದರೆ ಮೊದಲು ಜನಸಾಮಾನ್ಯರಲ್ಲಿ ಶಿಕ್ಷಣವನ್ನು ಹರಡಬೇಕು."

ಈ ಹೇಳಿಕೆಯು ಈಗ ಎಲ್ಲರೂ ಪೂರ್ಣವಾಗಿ ಒಪ್ಪಿ ಕೊಂಡಿರುವ ವಾಸ್ತವಾಂಶವಾಗಿದೆ. ಹಾಗೆ ನೋಡಿದರೆ, ಜನ ಸಾಮಾನ್ಯರಲ್ಲಿ ಶಿಕ್ಷಣವನ್ನು ಹರಡಲು ವಿಫಲವಾಗಿರುವುದೇ ಭಾರತದ ಆರ್ಥಿಕ ಅಭಿವೃದ್ಧಿ ಮತ್ತು ಪ್ರಗತಿಗೆ ಇಲ್ಲಿಯವರೆಗೂ ಪ್ರಮುಖ ಅಡ್ಡಿಯಾಗಿದೆ. ಈ ಸತ್ಯಾಂಶವನ್ನು ಸರ್ಕಾರ, ವಿಶ್ವಬ್ಯಾಂಕ್ ಮತ್ತಿತರ ಸಂಘಸಂಸ್ಥೆಗಳು ಈಗ ಒಪ್ಪಿಕೊಂಡಿವೆ.

ಸ್ವಾಮಿ ವಿವೇಕಾನಂದರು ಶಿಕ್ಷಣದ ಮಹತ್ವವನ್ನು ಮಾತ್ರವೇ ಎತ್ತಿತೋರಿಸಲಿಲ್ಲ, ಶಿಕ್ಷಣವನ್ನು ಯಾವ ರೀತಿ ಕೊಡಬೇಕು ಎನ್ನುವುದನ್ನೂ ಅವರು ತೋರಿಸಿಕೊಟ್ಟರು. ಭಾರತದ ಸಮಸ್ಯೆ ಎಂದರೆ ಇಲ್ಲಿನ ಬಹುಪಾಲು ಜನರು ಗ್ರಾಮಗಳಲ್ಲಿ ವಾಸಿಸುತ್ತಾರೆ ಹಾಗೂ ಆ ಗ್ರಾಮಗಳು ಇತ್ತೀಚಿನವರೆಗೂ ಸಂಪರ್ಕಿಸಲು ಸಾಧ್ಯವಾಗಿರದ ದೂರದೂರದ ಪ್ರದೇಶಗಳಲ್ಲಿವೆ. ಇದಲ್ಲದೆ, ತಮ್ಮ ಕುಟುಂಬದ ವರಮಾನವನ್ನು ಹೆಚ್ಚಿಸಲು ಬಹುತೇಕ ಬಡಮಕ್ಕಳು, ವಿಶೇಷವಾಗಿ ಹಳ್ಳಿಗಳಲ್ಲಿ, ಕೆಲಸಕಾರ್ಯಗಳಲ್ಲಿ ತೊಡಗಿಕೊಳ್ಳಬೇಕಾಗುತ್ತದೆ. ಆದ್ದರಿಂದ ಶಾಲೆಯ ಮೂಲಕ ಶಿಕ್ಷಣವನ್ನು ಕೊಡುವ ಪ್ರಕ್ರಿಯೆಯಿಂದ ಕೇವಲ ಕೆಲವೇ ಮಕ್ಕಳಿಗೆ ಮಾತ್ರವೇ ಅನುಕೂಲವಾಗುತ್ತದೆ. ಈ ಪರಿಸ್ಥಿತಿಯ ಬಗ್ಗೆ ಉಲ್ಲೇಖಿಸುತ್ತ ಸ್ವಾಮೀಜಿ ಹೀಗೆ ಹೇಳುತ್ತಾರೆ: "ಪ್ರತಿಯೊಂದು ಗ್ರಾಮದಲ್ಲಿಯೂ ಉಚಿತ ಶಾಲೆಯನ್ನು ತೆರೆಯುವ ಸ್ಥಿತಿಯಲ್ಲಿ ನಾವು ಇದ್ದೇವೆ ಎಂದು ಭಾವಿಸೋಣ, ಇಷ್ಟಾದರೂ ಬಡಬಾಲಕರು ತಮ್ಮ ವರಮಾನವನ್ನು ಗಳಿಸಿಕೊಳ್ಳಲು ಹೊಲ ಉಳುವುದಕ್ಕೆ ಹೋಗುತ್ತಾರೆಯೇ ಹೊರತು, ನಿಮ್ಮ ಶಾಲೆಗೆ ಬರುವುದಿಲ್ಲ... ಈ ಸಮಸ್ಯೆಗೆ ನಾನೊಂದು ಪರಿಹಾರವನ್ನು ಕಂಡುಹಿಡಿದಿದ್ದೇನೆ. ಅದೆಂದರೆ ಇದು. ಬೆಟ್ಟವು ಮಹಮ್ಮದನ ಬಳಿಗೆ ಬರಲಾಗದಿದ್ದರೆ, ಮಹಮ್ಮದನೇ ಬೆಟ್ಟದ ಕಡೆಗೆ ಹೋಗಬೇಕು. ಬಡಜನರು ಶಿಕ್ಷಣದ ಕಡೆಗೆ ಬರಲಾಗದಿದ್ದರೆ, ಶಿಕ್ಷಣವೇ ಅವರ ಹೊಲ, ಕಾರ್ಖಾನೆ – ಎಲ್ಲ ಕಡೆ ತಲುಪಬೇಕು."

ನಾವು ಇವತ್ತು ಯಾವುದನ್ನು 'ಅನೌಪಚಾರಿಕ ಶಿಕ್ಷಣ' ಎಂದು ಕರೆಯುತ್ತೇವೆಯೋ, ಅದರ ಬಗ್ಗೆಯೇ ಇಲ್ಲಿ ಸ್ವಾಮೀಜಿ ಮಾತ ನಾಡುತ್ತಿದ್ದಾರೆ ಎನ್ನುವುದು ಸುಸ್ಪಷ್ಟ. ಅದಲ್ಲದೆ ಸ್ವಾಮೀಜಿಯವರು, ಇಂದು 'ಔದ್ಯೋಗಿಕ ಶಿಕ್ಷಣ' *(Vocational Education)* ಎಂದು ಯಾವುದನ್ನು ನಾವು ಕರೆಯುತ್ತೇವೆಯೋ, ಅದನ್ನು ಮೊಟ್ಟಮೊದಲ ಬಾರಿಗೆ ಪ್ರತಿಪಾದಿಸಿದವರು ಕೂಡ. ವರಮಾನವನ್ನು ಹೆಚ್ಚಿಸಿ ಕೊಳ್ಳುವ ಯಾವುದಾದರೂ ಉದ್ಯೋಗ ಅಥವಾ ಕೌಶಲದಲ್ಲಿ ಬಡಜನರಿಗೆ ತರಬೇತಿಯನ್ನು ನೀಡಬೇಕು ಎಂದು ಸ್ವಾಮೀಜಿ ಇಚ್ಛೆ ಪಟ್ಟಿದ್ದರು. ಇದಲ್ಲದೆ, ಭಾರತದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ವಿದ್ಯಾಭ್ಯಾಸದ ಪಠ್ಯಕ್ರಮದಲ್ಲಿ ಅಳವಡಿಸುವುದಕ್ಕೂ ಅವರು ಒಲವು ತೋರಿಸಿದ್ದರು.

ಮೇಲೆ ಹೇಳಿದ ಅನೌಪಚಾರಿಕ ಶಿಕ್ಷಣವನ್ನು ನೀಡುವುದಾದರೂ ಹೇಗೆ? ಮಕ್ಕಳಿಗೆ ಅವರವರ ಕಾರ್ಯಕ್ಷೇತ್ರಗಳಲ್ಲಿಯೇ ವಿದ್ಯಾ ಭ್ಯಾಸವನ್ನು ಒದಗಿಸುವುದಾದರೂ ಹೇಗೆ? ಈ ಪ್ರಶ್ನೆಗಳಿಗೆ ಉತ್ತರವಾಗಿ, ಸ್ವಾಮೀಜಿ ಕ್ರಾಂತಿಕಾರಕವಾದ ಹೆಜ್ಜೆಯೊಂದನ್ನು ಇಡುತ್ತಾರೆ. ಬೋಧನೆಯ ಕಾರ್ಯಕ್ಕೆ ಪರಿವ್ರಾಜಕರಾದ ಸಂನ್ಯಾಸಿ ಗಳನ್ನು ತೊಡಗಿಸಿಕೊಳ್ಳುವುದೇ ಅದು. ಅವರು ಕೇವಲ ಅಲೆಮಾರಿ ಜೀವನವನ್ನು ನಡೆಸುವ ಬದಲು, ಒಂದು ಕಡೆ ನೆಲೆಸಿ, ಆ ಸ್ಥಳದ ಮಕ್ಕಳಿಗೆ ಪಾಠ ಹೇಳಿಕೊಡಲಿ ಎನ್ನುತ್ತಾರೆ ಅವರು. ಈ ನಿಟ್ಟಿನಲ್ಲಿ ಬೇರೆ ಪಂಗಡಗಳ ಸಂನ್ಯಾಸಿಗಳ ಸಹಾಯ ದೊರಕದೆ ಇದ್ದುದರಿಂದ, ತಮ್ಮ ಸಹೋದರ ಸಂನ್ಯಾಸಿಗಳನ್ನೇ ಈ ಬಗೆಯ ಸೇವಾಕಾರ್ಯಕ್ಕೆ ಸ್ವಾಮೀಜಿ ನಿಯೋಜಿಸಿದರು.

ಇಷ್ಟಾಗಿಯೂ ಕೇವಲ ಲೌಕಿಕ ಶಿಕ್ಷಣವನ್ನು ನೀಡುವುದರಲ್ಲಿನ ಅಪಾಯದ ಬಗ್ಗೆಯೂ ಸ್ವಾಮೀಜಿಯವರಿಗೆ ಪೂರ್ಣ ಅರಿವಿತ್ತು. ಆದ್ದರಿಂದಲೇ ಅವರು ಲೌಕಿಕ ಶಿಕ್ಷಣದ ಜೊತೆಜೊತೆಗೆ ಜನರಲ್ಲಿ ಆಧ್ಯಾತ್ಮಿಕ ಭಾವನೆಗಳನ್ನೂ ಹರಡಬೇಕೆಂದು ಬಯಸಿದ್ದರು. ಅದಕ್ಕೆಂದೇ ಅವರು ಕರೆಕೊಟ್ಟರು: "ಭಾರತವನ್ನು ಸಾಮಾಜಿಕ ಅಥವಾ ರಾಜಕೀಯ ಭಾವನೆಗಳಿಂದ ಪ್ರವಹಿಸುವ ಮೊದಲು, ಅದನ್ನು ಆಧ್ಯಾತ್ಮಿಕ ಭಾವನೆಗಳಿಂದ ಮುಳುಗಿಸಿಬಿಡಿ" ಎಂದು.

(ಮುಂದುವರೆಯುವುದು)




# ಜೀವನ ಮಕರಂದ

('ಬದುಕಲು ಕಲಿಯಿರಿ' ಪುಸ್ತಕದ ಸಂಗ್ರಹ)

ಮೂಲ ಲೇಖಕರು : ಸ್ವಾಮಿ ಜಗದಾತ್ಮಾನಂದ ಸಂಗ್ರಹ : ಡಾ. ಜಿ.ವಿ. ಕುಲಕರ್ಣಿ

**ಸ್ವಾಮಿ ಜಗದಾತ್ಮಾನಂದಜಿ ಅವರ ಅತ್ಯಂತ ಪ್ರಸಿದ್ಧವಾದ 'ಬದುಕಲು ಕಲಿಯಿರಿ' ಪುಸ್ತಕದ ಸರಳ ಸಂಗ್ರಹವನ್ನು ಈ ಸಂಚಿಕೆಯಿಂದ ಪ್ರಾರಂಭಿಸುತ್ತಿದ್ದೇವೆ. ಇದನ್ನು ಮಾಡಿಕೊಟ್ಟಿರುವ 'ಜೀವಿ' ಎಂಬ ಕಾವ್ಯನಾಮದಲ್ಲಿ ಹಲವಾರು ಮೌಲಿಕ ಸಾಹಿತ್ಯಕೃತಿಗಳನ್ನು ರಚಿಸಿರುವ ಡಾ. ಜಿ.ವಿ. ಕುಲಕರ್ಣಿಯವರು ಮುಂಬಯಿಯ ಕಾಲೇಜುಗಳಲ್ಲಿ ಕನ್ನಡ, ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದು, ಈಗ ನಿವೃತ್ತರಾಗಿದ್ದಾರೆ. ಆರೋಗ್ಯ, ಯೋಗಾಸನ, ಪ್ರಾಣಾಯಾಮ, ಪ್ರಕೃತಿಚಿಕಿತ್ಸೆ ಇವರ ಇತರ ಆಸಕ್ತಿಗಳು. ಕನ್ನಡ, ಇಂಗ್ಲಿಷ್, ಸಂಸ್ಕೃತ ಭಾಷೆಗಳನ್ನು ಕರಗತ ಮಾಡಿಕೊಂಡಿರುವ ಇವರು ಕನ್ನಡದ ಒಬ್ಬ ಪ್ರತಿಭಾವಂತ ಲೇಖಕರು.**

## ಪೀಠಿಕೆ

ಸ್ವಾಮಿ ಜಗದಾತ್ಮಾನಂದಜಿ ಅವರು ಬರೆದ 'ಬದುಕಲು ಕಲಿಯಿರಿ' ಎಂಬ ಪುಸ್ತಕ ಕನ್ನಡ ಪ್ರಕಾಶನದಲ್ಲಿ ಒಂದು ದಾಖಲೆಯನ್ನೇ ನಿರ್ಮಿಸಿದೆ. ಇಲ್ಲಿಯವರೆಗೆ ಅದರ ಮೂರು ಲಕ್ಷಕ್ಕೂ ಹೆಚ್ಚು ಪ್ರತಿಗಳು ಮಾರಾಟಗೊಂಡಿವೆ. ಈ ಪುಸ್ತಕವನ್ನು ಓದಿದವರಿಗೆ ಇದರ ಮಹತ್ವ ತಿಳಿದಿದೆ. ಇದನ್ನು ಓದಲು ಅವಕಾಶ ದೊರೆಯದ ಅಸಂಖ್ಯ ವಾಚಕರಿಗಾಗಿ ಈ ಪುಸ್ತಕದ ಸಾರವನ್ನು ಉಣಬಡಿಸುವುದು ಅವಶ್ಯ ಎನಿಸುತ್ತದೆ.

ಈ ಪುಸ್ತಕವನ್ನು ಯುವಕ-ಯುವತಿಯರು ಅವಶ್ಯವಾಗಿ ಓದಬೇಕು. ಕಾನ್ವೆಂಟ್ ಮಕ್ಕಳಿಗೆ ಕನ್ನಡ ಓದಲು ಸರಿಯಾಗಿ ಬರುವುದಿಲ್ಲ, ಬಂದರೂ ಹೆಚ್ಚಿನ ಓದಿನ, ವ್ಯಾಸಂಗದ ಅಭಿರುಚಿ ಇರುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಕನ್ನಡ ಬಲ್ಲ ಪಾಲಕರು ಈ ಪುಸ್ತಕವನ್ನು ಓದಿ ತಮ್ಮ ಮಕ್ಕಳಿಗೆ ಇಲ್ಲಿಯ ರಸಭರಿತ ಕತೆ, ಉಪಕತೆ, ಉದಾಹರಣೆಗಳನ್ನು ತಿಳಿಸಬೇಕು, ಅವರಲ್ಲಿ ಉತ್ಸಾಹ ಕುಗ್ಗಿದಾಗ ಈ ಪುಸ್ತಕದಲ್ಲಿಯ ವಿಚಾರಗಳು ಸಂಜೀವಿನಿಯಂತೆ ಪ್ರಭಾವ ಬೀರುತ್ತವೆ.

ಸಾಹಿತ್ಯದಲ್ಲಿ ಮೂರು ರೀತಿಯಲ್ಲಿ ಪ್ರಭಾವ ಬೀರುವ ಕೃತಿಗಳಿವೆ. ಪ್ರಭುವಿನಂತೆ ಅಧಿಕಾರವಾಣಿಯಿಂದ ಹೇಳುವ ಶಾಸ್ತ್ರಗಳು (**ಪ್ರಭುಸಮ್ಮಿತ**); ಮಿತ್ರನಂತೆ ಹೇಳುವ ಇತಿಹಾಸ-ಪುರಾಣಗಳು (**ಮಿತ್ರಸಮ್ಮಿತ**); ಇನ್ನು ಕಾಂತೆಯಂತೆ, ಮನದನ್ನೆಯಂತೆ ಹಿತವಚನ ನುಡಿಯುವ ಕಾವ್ಯಗಳು (**ಕಾಂತಾಸಮ್ಮಿತ**). ಪ್ರೊ| ಕು.ಶಿ. ಹರಿದಾಸ ಭಟ್ಟರು 'ಬದುಕಲು ಕಲಿಯಿರಿ' ಪುಸ್ತಕವು 'ಮಿತ್ರಸಮ್ಮಿತ' ದಂತೆ ಕೆಲಸ ಮಾಡುತ್ತದೆ ಎಂದು ಹೇಳುತ್ತಾರೆ; "...ಒಟ್ಟಿನಲ್ಲಿ ಕನ್ನಡದಲ್ಲೇ ಇರುವ ಹೊಸಯುಗದ ಉಪನಿಷತ್ತು ಇದು" ಎನ್ನುತ್ತಾರೆ.

ಬಹುಶ್ರುತರಾದ ಸ್ವಾಮಿ ಜಗದಾತ್ಮಾನಂದಜಿಯವರು ಕನ್ನಡದಲ್ಲಿ ಇಂಥದೊಂದು ಪುಸ್ತಕದ ಕೊರತೆ ಇರುವುದನ್ನು ಕಂಡರು. ಸ್ಮೈಲ್ ಅವರ 'ಸೆಲ್ಫ್ ಹೆಲ್ಪ್' (Self-Help) ಎಂಬ ಇಂಗ್ಲಿಷ್ ಪುಸ್ತಕದಿಂದ ಸ್ಫೂರ್ತಿ ಪಡೆದು ಪ್ರಸ್ತುತ ಗ್ರಂಥವನ್ನು ಎರಡು ಭಾಗಗಳಲ್ಲಿ ರಚಿಸಿದರು. 'ಸೆಲ್ಫ್ ಹೆಲ್ಪ್' ಎಂಬ ಪುಸ್ತಕ ನೂರೈವತ್ತಕ್ಕೂ ಹೆಚ್ಚು ವರ್ಷಗಳ ಹಿಂದೆ ಪ್ರಕಟಗೊಂಡಿತ್ತು (೧೮೫೯). ಹಲವಾರು ಭಾಷೆಗಳಲ್ಲಿ ಅದು ನೂರಾರು ಸಂಸ್ಕರಣಗಳಲ್ಲಿ ಪ್ರಕಟವಾಗಿದೆ.

"ನಾವು ಬದುಕು ಎಂದು ತಿಳಿದುಕೊಂಡಿರುವುದು ವೃತ್ತದ ಅರ್ಧ ಭಾಗ ಮಾತ್ರ. ಇನ್ನರ್ಧ ಭಾಗ ಬದುಕಿನ ಆಚೆಗೆ, ದೇಹಕ್ಕೆ ಅತೀತವಾದ ಅಸ್ತಿತ್ವದಲ್ಲಿ ಅಡಗಿಕೊಂಡಿದೆ." ... "ಕಷ್ಟ, ನೋವು, ನರಳಾಟಗಳಲ್ಲಿ ಸಿಲುಕಿದವರನ್ನು ಕಂಡು ಅವರಿಗೆ ತಮ್ಮಿಂದಾದ ಸಹಾಯ ಮಾಡುವುದು ಸತ್ಕರ್ಮವೆನಿಸುತ್ತದೆ." ..."ಕರ್ಮ ಸಿದ್ಧಾಂತವನ್ನು ತಪ್ಪಾಗಿ ತಿಳಿದುಕೊಂಡು, ಅದನ್ನು ವಿಧಿವಾದ ಮತ್ತು ಆಲಸ್ಯಕ್ಕೆ ಕಾರಣವಾದ ಸಿದ್ಧಾಂತವೆಂದು ಟೀಕಿಸುವವರು ನಮ್ಮಲ್ಲಿ ಸರ್ವತ್ರ ಕಂಡುಬರುತ್ತಾರೆ." ಈ ಮಾತುಗಳನ್ನು ಲೇಖಕರು ತಮ್ಮ ಮುನ್ನುಡಿಯಲ್ಲಿ ಹೇಳಿದ್ದಾರೆ. ಈ ಹೊತ್ತಿಗೆಯಲ್ಲಿ ಏಳು ಅಧ್ಯಾಯಗಳಿವೆ. ಮೊದಲನೆಯದು **'ಪ್ರಯತ್ನದಿಂದ ಪರಮಾರ್ಥ'**. ಇಲ್ಲಿಯ ಪರಮಾರ್ಥ ಕೇವಲ ಆಧ್ಯಾತ್ಮಿಕವಾಗಿಲ್ಲ, ಇದು ಪರಮ+ಅರ್ಥ(ತಿರುಳು), ಪರಮ+ಅರ್ಥ(ಸಂಪಾದನೆ)ಯೂ ಆಗಿದೆ.

ನೂರಾರು ಕಥೆ, ಉಪಕಥೆ, ಕಥಾನಕ, ಉದಾಹರಣೆಗಳನ್ನು ಕೊಟ್ಟು ಮನುಷ್ಯನ ಪ್ರಯತ್ನ ಬಹು ಮುಖ್ಯವಾದುದು ಎಂಬ ಮಾತನ್ನು ಸ್ವಾಮಿ ಜಗದಾತ್ಮಾನಂದರು ಪ್ರತಿಪಾದಿಸುತ್ತಾರೆ. ಯಾವುದೇ ಪ್ರತಿಭೆ, ಕಲೆ, ಕಾರ್ಯವೈಖರಿಯ ಹಿಂದೆ ಅಗಾಧ ಪರಿಶ್ರಮ ಇರುತ್ತದೆ ಎಂಬುದನ್ನು ಮರೆಯುವಂತಿಲ್ಲ ಎಂಬ ಮಾತನ್ನೂ ತಮ್ಮ ಈ ಬರಹದಲ್ಲಿ ಅವರು ಚೆನ್ನಾಗಿ ಬಿಂಬಿಸುತ್ತಾರೆ.

ಈ ಪುಸ್ತಕ ಎಷ್ಟೊಂದು ಅಮೂಲ್ಯವಾಗಿದೆ ಎಂದರೆ ಪ್ರತಿಯೊಂದು ಶಾಲೆಯ ಮಕ್ಕಳೂ ಇದನ್ನು ಓದಬೇಕು; ಇಲ್ಲಿಯ ವಿಚಾರಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ತಮ್ಮ ವ್ಯಕ್ತಿತ್ವವನ್ನು ವಿಕಾಸಗೊಳಿಸಿಕೊಳ್ಳಬೇಕು. ಮೂಲ ಪುಸ್ತಕ ಪುಷ್ಪವಾದರೆ, ಇಲ್ಲಿ ಅದರ ಮಕರಂದವನ್ನು ಶೇಖರಿಸಿದ್ದೇನೆ. ಇದು ಟ್ರೈಲರ್ ಮಾತ್ರ, ಮೂಲ ಚಲನಚಿತ್ರ ನೋಡಲು ಸ್ಫೂರ್ತಿ ನೀಡುವ ಕೃತಿ. ಈ ಸಾರಸಂಗ್ರಹದ ಪುಸ್ತಿಕೆ ಹಸಿವನ್ನು ಹುಟ್ಟಿಸುತ್ತದೆ ಅಷ್ಟೆ. ಸತ್ವಯುತ ಆಹಾರ ಮೂಲ ಪುಸ್ತಕ 'ಬದುಕಲು ಕಲಿಯಿರಿ'ಯಲ್ಲಿದೆ ಎಂಬ ಮಾತನ್ನು ಮರೆಯಬಾರದು.

– *'ಜೀವಿ' ಕುಲಕರ್ಣಿ*

ಅಧ್ಯಾಯ ಒಂದು

# ಪ್ರಯತ್ನದಿಂದ ಪರಮಾರ್ಥ

"ಸ್ವಪ್ರಯತ್ನದಿಂದ ಸರ್ವತೋಮುಖ ಏಳ್ಗೆ ಸಾಧಿಸಬಲ್ಲ ಒಬ್ಬನೇ ಒಬ್ಬ ವ್ಯಕ್ತಿ ಈ ವಿಶ್ವದಲ್ಲಿ ಖಂಡಿತವಾಗಿಯೂ ಇದ್ದಾನೆ – ಆತ ನೀನೇ."

– ಆಲ್ಡಸ್ ಹಕ್ಸ್‌ಲೀ

"ಏಳು! ಎದ್ದೇಳು! ನಿನ್ನ ಭವಿಷ್ಯವನ್ನು ರೂಪಿಸುವ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತುಕೋ. ನಿನ್ನ ಉತ್ತರೋತ್ತರ ಶ್ರೇಯಸ್ಸಿಗೆ ಬೇಕಾದ ಎಲ್ಲ ಶಕ್ತಿ ಸಾಮರ್ಥ್ಯಗಳೂ ನಿನ್ನೊಳಗೇ ಇವೆ. ನೋಡು, ಮನಸ್ಸು ಮಾಡು. ಎದ್ದೇಳು. ಭವ್ಯ ಭವಿಷತ್ತಿನ ನಿರ್ಮಾಣಕ್ಕೆ ಇಂದೇ ಹೆಜ್ಜೆ ಇಡು."

–ಸ್ವಾಮಿ ವಿವೇಕಾನಂದ

ಎರಡು ಸಾವಿರಕ್ಕೂ ಹೆಚ್ಚು ಯಂತ್ರಗಳನ್ನು ಸೃಷ್ಟಿಸಿದ ಥಾಮಸ್ ಎಡಿಸನ್ ಹೆಚ್ಚು ಕಲಿತಿರಲಿಲ್ಲ. ಆದರೆ ಅವನು ಅಸಾಧಾರಣ ಪ್ರತಿಭಾವಂತ. ಅವನ ಪ್ರಕಾರ 'ಆವಿಷ್ಕಾರಗಳು ಆಕಸ್ಮಿಕಗಳಲ್ಲ – ಅವು ನಿರಂತರ ಶ್ರಮಕ್ಕೆ ಒಲಿದ ವರಗಳು.' ಪ್ರತಿ ಯಶಸ್ಸಿನ ಹಿಂದೆ ಪರಿಶ್ರಮ ಇದ್ದೇ ಇರುತ್ತದೆ. ಇಂಗ್ಲಿಷಿನ ಒಂದು ನಾಣ್ಣುಡಿಯಲ್ಲಿ ಹೇಳಿರುವಂತೆ, 'Work (ಕಾರ್ಯ)ಕ್ಕಿಂತ Success (ಯಶಸ್ಸು) ಎಂಬ ಶಬ್ದ ಮೊದಲು ಬರುವುದು ಕೇವಲ ಇಂಗ್ಲಿಷ್ ನಿಘಂಟು ವಿನಲ್ಲಿ ಮಾತ್ರ.'

ಕೊಲೆಗಡುಕನೂ ಕ್ರೂರಿಯೂ ಆದ ಎಡ್ಡಿ ಎಂಬ ಹುಡುಗನನ್ನು ಫಾದರ್ ಫ್ಲೆನಾಗನ್ ಎಂಬುವವನು ಸುಧಾರಿಸಿ ಉತ್ತಮ ನಾಗರಿಕನನ್ನಾಗಿ ಪರಿವರ್ತಿಸಿದ ಚೇತೋಹಾರಿ ಕಥೆ 'ಮಕ್ಕಳ ಪಟ್ಟಣದ ಫಾದರ್ ಫ್ಲೆನಾಗನ್' ಎಂಬ ಪುಸ್ತಕದಲ್ಲಿದೆ. ಎಡ್ಡಿ ಎಂಬ ಹುಡುಗ ತನ್ನ ನಾಲ್ಕನೆಯ ವಯಸ್ಸಿನಲ್ಲಿ ತಂದೆತಾಯಿಯರನ್ನು ಕಳೆದುಕೊಂಡು ಅನಾಥನಾಗುತ್ತಾನೆ. ಎಂಟನೆಯ ವಯಸ್ಸಿಗೆ ತುಂಟಹುಡುಗರ ತಂಡದ ಮುಖ್ಯಸ್ಥನಾಗುತ್ತಾನೆ. ಇವನಿಗಿಂತ ವಯಸ್ಸಿನಲ್ಲಿ ಹಿರಿಯರಾದ ಹದಿವಯಸ್ಸಿನ ಬಾಲಕರು ಇವನನ್ನು ತಮ್ಮ 'ಗುರು' ಎಂದು ಮನ್ನಿಸಿ ಅನುಸರಿಸುತ್ತಾರೆ. ಏಕಾಂಗಿಯಾಗಿ ಈ ಹುಡುಗ ಬ್ಯಾಂಕೊಂದನ್ನು ಲೂಟಿಮಾಡಿ ಸಹಸ್ರಾರು ಡಾಲರ್‌ಗಳನ್ನು ಕದ್ದು ತನ್ನ ಪರಾಕ್ರಮ ತೋರಿಸುತ್ತಾನೆ. ಒಂದು ಪಿಸ್ತೂಲ್ ಸಂಪಾದಿಸಿ ಎಷ್ಟೋ ಉಪಹಾರ ಕೇಂದ್ರಗಳನ್ನು ಲೂಟಿ ಮಾಡುತ್ತಾನೆ. ಒಮ್ಮೆ ಒಬ್ಬ ಮುದುಕಿಯನ್ನು ಕೊಲ್ಲಲು ಪಿಸ್ತೂಲನ್ನು ಅಣಿಗೊಳಿಸುತ್ತಿದ್ದಾಗ ಪೋಲೀಸರ ಕೈಯಲ್ಲಿ ಸಿಕ್ಕಿಬಿದ್ದು, 'ಮಕ್ಕಳ ಪಟ್ಟಣ' ಸೇರುತ್ತಾನೆ (ರಿಮಾಂಡ್ ಹೋಮ್‌ನಂತಹದು). ಇಲ್ಲಿ ಕೂಡ ಇವನು ಇತರ ಮಕ್ಕಳನ್ನು ಬೈಯುತ್ತಾನೆ, ತನ್ನ ದರ್ಪ ತೋರಿಸುತ್ತಾನೆ. ಅಲ್ಲಿ ಎಲ್ಲರ ಗೌರವ ಸಂಪಾದಿಸಿದ ಹಿರಿಯರಾದ ಫಾದರ್ ಫ್ಲೆನಾಗನ್ ಅವರನ್ನೂ ಅವಾಚ್ಯ ಶಬ್ದಗಳಿಂದ ಬೈಯುತ್ತಾನೆ. ಆಟ ಆಡುವುದು, ಹೊಲದಲ್ಲಿ ಕೆಲಸ ಮಾಡುವುದು, ಬ್ಯಾಂಡ್ ಬಾರಿಸುವುದು ಅವನಿಗೆ 'ಬೋರ್'(ಬೇಸರ) ತರುವ ಕೆಲಸಗಳಾಗುತ್ತವೆ. ಪ್ರಾರ್ಥನೆಯ ವೇಳೆ ಬೆಕ್ಕಿನಂತೆ ಕೂಗುತ್ತಾನೆ. ಯಾವುದೇ ಕೆಲಸ ಹಾಳುಗೆಡವುದರಲ್ಲಿ ಅವನು ನಿಸ್ಸೀಮ. ಅವನ ಮುಖದಲ್ಲಿ ನಗೆಯನ್ನಾಗಲಿ, ಕಣ್ಣುಗಳಲ್ಲಿ ನೀರನ್ನಾಗಲಿ ಯಾರೂ ಕಾಣರು. ಕಾಲಿನಿಂದ ತಲೆಯವರೆಗೆ ದ್ವೇಷ ತುಂಬಿದ ವಿಷಜೀವಿ ಅವನಾಗಿದ್ದ.

ಇವನ ಸಹವಾಸ ಸಾಕಾದಾಗ ಶಿಕ್ಷಕರೆಲ್ಲ ಫಾದರ್‌ಗೆ ದೂರು ಒಯ್ಯುತ್ತಾರೆ, ಪತ್ರ ಬರೆಯುತ್ತಾರೆ. ಒಮ್ಮೆ ಎಡ್ಡಿಗೆ ವಿಪರೀತ ಜ್ವರ ಬರುತ್ತದೆ. ಫಾದರ್ ಅತ್ಯಂತ ಕರುಣೆಯಿಂದ ಅವನ ಆರೈಕೆ ಮಾಡುತ್ತಾರೆ. ಅವನು ಗುಣಮುಖನಾದಾಗ ಶಿಕ್ಷಕರೂ ಸಹಪಾಠಿ ವಿದ್ಯಾರ್ಥಿಗಳೂ ಅವನನ್ನು ವಿಶ್ವಾಸದಿಂದ ನೋಡುತ್ತಾರೆ. ಒಂದು ದಿನ ಎಡ್ಡಿಯು ಫಾದರ್ ಕೋಣೆಯನ್ನು ನೇರವಾಗಿ ಪ್ರವೇಶಿಸುತ್ತಾನೆ. ಅವರನ್ನು ಪ್ರಶ್ನಿಸುತ್ತಾನೆ, "ನೀವು ನನ್ನನ್ನು ಒಳ್ಳೆಯವನನ್ನಾಗಿ ಸರಿಪಡಿಸಲು ಪ್ರಯತ್ನಿಸುತ್ತಿದ್ದೀರಿ, ಆದರೆ ಅದೆಷ್ಟು ಸಫಲರಾಗಿದ್ದೀರಿ? ಇಲ್ಲಿಗೆ ಬರುವ ಮುನ್ನ ನಾನು ಒಬ್ಬ ಸಿಸ್ಟರ್‌ಗೆ ಒದ್ದು ಬಂದೆ, ಏನು ಹೇಳ್ತೀರಿ?" ಆಗ ಫಾದರ್ ಫ್ಲೆನಾಗನ್ ಉತ್ತರಿಸುತ್ತಾರೆ, "ಈಗಲೂ ಹೇಳುತ್ತೇನೆ, ನೀನು ಸ್ವಭಾವತಃ ಒಳ್ಳೆಯ ಹುಡುಗನೇ." ಆಗ ಎಡ್ಡಿ ಅಂದ, "ನಿಮಗೆ ಚೆನ್ನಾಗಿ ಗೊತ್ತಿದೆ, ನಾನು ಒಳ್ಳೆಯ ಹುಡುಗನಲ್ಲ ಎಂದು. ಆದರೆ ನೀವು ಸುಳ್ಳು ಏಕೆ ಹೇಳುತ್ತೀರಿ? ಒಂದು ಸುಳ್ಳನ್ನು ಮತ್ತೆ ಮತ್ತೆ ಹೇಳುವ ಮಹಾಸುಳ್ಳರು ನೀವಲ್ಲವೇ?" ಆಗ ಫಾದರ್ ಅವನಿಗೆ ಒಂದು ಪ್ರಶ್ನೆ ಕೇಳುತ್ತಾರೆ, "ಒಳ್ಳೆಯ ಹುಡುಗ ಹೇಗಿರುತ್ತಾನೆ? ಶಿಕ್ಷಕರಿಗೆ ವಿಧೇಯನಾಗಿ ಇರುತ್ತಾನೆ, ಅಲ್ಲವೇ?" ಆಗ ಎಡ್ಡಿ, "ಹೌದು" ಎಂದ. ಅದಕ್ಕೆ ಫಾದರ್ ಹೇಳುತ್ತಾರೆ: "ಇಲ್ಲಿಯವರೆಗೆ ನಿನಗೆ ದೊರೆತ ಶಿಕ್ಷಕರು ಬೀದಿಗಳ್ಳರು, ತುಂಟರು, ದುಷ್ಟರು. ಅವರ ಮಾರ್ಗ ಅನುಸರಿಸಿ ನೀನೂ ದುಷ್ಟನೆಂದೇ ಭಾವಿಸಿದೆ. ಇಲ್ಲಿ ಒಳ್ಳೆಯ ಶಿಕ್ಷಕರು ದೊರೆತಿದ್ದಾರೆ. ಅವರಿಗೆ ವಿಧೇಯನಾಗಿ ನಡೆದರೆ ನೀನೂ ಒಳ್ಳೆಯವನಾಗುವದಿಲ್ಲವೇ?" ಈ ಪ್ರಶ್ನೆ ಎಡ್ಡಿಯ ಮರ್ಮವನ್ನೇ ಭೇದಿಸಿತು. ಆ ಕ್ಷಣದಿಂದ ಅವನ ಜೀವನದ ನಕ್ಷೆಯೇ ಬದಲಾಯಿತು. ಹತ್ತು ವರ್ಷಗಳಲ್ಲಿ ಪದವಿ ಪರೀಕ್ಷೆಯಲ್ಲಿ ಉನ್ನತ ಸ್ಥಾನ ಗಳಿಸಿದ. ಮುಂದೆ ಸೈನ್ಯ ಸೇರಿದ. ಉನ್ನತ ಸೈನ್ಯಾಧಿಕಾರಿಯಾದ. ಗೆಳೆಯರಿಗೆ, ಸಹೋದ್ಯೋಗಿಗಳಿಗೆ ಅಚ್ಚುಮೆಚ್ಚಿನವನಾದ, ಅವರ ಪ್ರೀತಿ ವಿಶ್ವಾಸ ಗಳಿಸಿದ. **'ಸ್ವಭಾವತಃ ನೀನು ಒಳ್ಳೆಯವನು'** ಎಂಬ ಬೀಜವಾಕ್ಯ ಅವನ ಮನದಾಳದಲ್ಲಿ ಬೇರುಬಿಟ್ಟಿತು. ಅವನಲ್ಲಿ ಬೇರೂರಿದ್ದ 'ನಾನು ಕೆಟ್ಟವನು' ಎಂಬ ಭಾವನೆಯನ್ನು ನಿರ್ಮೂಲಗೊಳಿಸಿತು. ಇಂತಹ ಕತೆಗಳು ವಿದ್ಯಾರ್ಥಿಗಳಿಗೆ ದಾರಿದೀಪ ಆಗುವದಿಲ್ಲವೇ?

ವೈದ್ಯವಿಜ್ಞಾನವನ್ನು ಓದಿ, ನಂತರ ಸ್ವಾಮಿ ವಿವೇಕಾನಂದರ ಜೀವನದಿಂದ ಪ್ರಭಾವಿತರಾಗಿ ರಾಮಕೃಷ್ಣ ಮಿಷನ್ ಸೇರಿದ ಒಬ್ಬ ಸ್ವಾಮಿಗಳ ಜೀವನದಲ್ಲಿಯ ಒಂದು ಪ್ರಸಂಗವನ್ನು ಲೇಖಕರು ದಾಖಲಿಸುತ್ತಾರೆ. ಎಂ.ಬಿ.ಬಿ.ಎಸ್. ಪದವಿಯ ನಂತರ ಅವರಿಗೆ ಔಷಧೋಪಚಾರ ವಿಭಾಗದಲ್ಲಿ 'ಡೆಮಾನ್‌ಸ್ಟ್ರೇಟರ್' ಕೆಲಸ ದೊರೆತಿತ್ತಂತೆ. ವೈದ್ಯಕೀಯ ವಿದ್ಯಾರ್ಥಿಗಳಿಗೆ, ಆಸ್ಪತ್ರೆಯ ರೋಗಿಗಳನ್ನು ಪರೀಕ್ಷಿಸಿ, ಅವರ ರೋಗದ ಕಾರಣವನ್ನು ಕಂಡು ಹಿಡಿಯುವ ವಿಧಾನವನ್ನು (ಡಯಗ್ನಾಸಿಸ್) ಬೋಧಿಸುವ

ಕೆಲಸ ಇವರದಾಗಿತ್ತಂತೆ. ಹಿಂದಿನ ಪರೀಕ್ಷೆಯಲ್ಲಿ ಫೇಲಾದ ೧೩ ವಿದ್ಯಾರ್ಥಿಗಳ ಬ್ಯಾಚ್ ಇವರ ಪಾಲಿಗೆ ಬಂದಿತ್ತು. ಇಂಥ ವಿದ್ಯಾರ್ಥಿಗಳಿಗೆ ಪಾಠ ಹೇಳುವದೂ ಒಂದು ಸಮಸ್ಯೆಯೇ ಆಗಿತ್ತು. ಆ ವಿದ್ಯಾರ್ಥಿಗಳಲ್ಲಿ 'ಆತ್ಮವಿಶ್ವಾಸ'ದ ಕೊರತೆಯಿದ್ದುದನ್ನು ಇವರು ಗಮನಿಸಿದರು. ಮೊದಲು ಆತ್ಮವಿಶ್ವಾಸವನ್ನು ತುಂಬಿದರು. ಇವರ ಮಾರ್ಗದರ್ಶನದಲ್ಲಿ ಅವರೆಲ್ಲರೂ ಪಾಸಾದರು ಅಷ್ಟೇ ಅಲ್ಲ, ಮುಂದೆ ಯಶಸ್ಸಿನ ಮೆಟ್ಟಲನ್ನೂ ಏರತೊಡಗಿದರಂತೆ.

"ಎಂಥ ಅದ್ಭುತ ಯಂತ್ರ ನಮ್ಮ ದೇಹ! ಎಷ್ಟು ಅದ್ಭುತ ಶಕ್ತಿ ಹುದುಗಿದೆ ನಮ್ಮಲ್ಲಿ! ಆದರೂ ಕಣ್ಣು ಮುಚ್ಚಿಕೊಂಡು ಕತ್ತಲೆ ಎಂದು ಅಳುವವರು ನಾವು."

"ನಿಮ್ಮಲ್ಲಿರುವ ಸುಪ್ತ ಶಕ್ತಿಗಳನ್ನು ಬಡಿದೆಬ್ಬಿಸಬೇಕಾದರೆ ನಿಮ್ಮ ಜೀವನಕ್ಕೊಂದು ಗುರಿ ಇರಬೇಕು. ಗುರಿ ಎಂದರೆ ಮೋಕ್ಷಾಕಾಂಕ್ಷೆ ಒಂದೇ ಆಗಬೇಕೆಂದಿಲ್ಲ....ನೀವು ಸಭೆಯೊಂದರಲ್ಲಿ ಭಾಷಣ ಮಾಡಲು ಯೋಚಿಸಿರಬಹುದು. ವ್ಯಾಪಾರ ಮಾಡಲು ಯೋಜನೆ ಹಾಕಿರಬಹುದು. ಕಲಾವಿದನಾಗಲು, ಕಾದಂಬರಿಕಾರನಾಗಲು ಇಚ್ಛಿಸಿರಬಹುದು. ನಿಮ್ಮ ಉದ್ಯೋಗದಲ್ಲೇ ಚೆನ್ನಾಗಿ ದುಡಿದು ಹೆಚ್ಚು ಹಣ ಗಳಿಸುವ ಯೋಚನೆ ಇರಬಹುದು. ಏನೇ ಇರಲಿ. ನಿಮ್ಮ ಉದ್ದೇಶವನ್ನು ಕುರಿತು ಸ್ಪಷ್ಟವಾದ ಅರಿವು ನಿಮಗಿರಬೇಕಾಗುತ್ತದೆ. ಆ ಒಂದು ವಿಶಿಷ್ಟ ಬಯಕೆ ಅಥವಾ ಭಾವನೆ ನಿಮ್ಮನ್ನು ಕಾರ್ಯ ಪ್ರವೃತ್ತರನ್ನಾಗಿ ಮಾಡುತ್ತದೆ."

ಜರ್ಮನಿ ದೇಶದ ಫ್ರ್ಯಾಂಕ್‌ಫರ್ಟ್ ನಗರದ ಡಾ. ಹೆರಾಲ್ಡ್ ಸ್ಟುಜ್ ಎನ್ನುವವರಿಗೆ ೩೦೦ ಭಾಷೆಗಳು ಬರುತ್ತಿದ್ದವಂತೆ. ಓದು, ಬರಹ, ಮಾತನಾಡುವುದು, ಅಷ್ಟೇ ಅಲ್ಲ, ಸರಾಗವಾಗಿ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಅನುವಾದಿಸುವ ಸಾಮರ್ಥ್ಯ ಕೂಡ ಅವರಲ್ಲಿ ಇತ್ತಂತೆ. "ಇದನ್ನೆಲ್ಲ ನೀವು ಹೇಗೆ ಸಾಧಿಸಿದಿರಿ?" ಎಂದು ಕೇಳಿದರೆ ಅವರು ಹೇಳುತ್ತಿದ್ದರಂತೆ, "ಬಹುಭಾಷಾಜ್ಞಾನ ಪಡೆಯಲು ಮೂರು ಸಂಗತಿಗಳು ಬೇಕು: (೧) ಕಲಿಯಬೇಕು, ತಿಳಿಯಬೇಕು ಎಂಬ ತೀವ್ರ ಹಂಬಲ (೨) ಅನವರತ ಶ್ರದ್ಧೆಯಿಂದ ಕೂಡಿದ ಪರಿಶ್ರಮ (೩) ಅವಕಾಶ."

ಅಬ್ರಹಾಂ ಲಿಂಕನ್‌ಗೆ ದೊಡ್ಡ ಲಾಯರ್ ಆಗಬೇಕೆಂಬ ತೀವ್ರ ಹಂಬಲ ಇತ್ತಂತೆ. ಒಮ್ಮೆ ಅವನು 'ಬ್ಲ್ಯಾಕ್‌ಸ್ಟೋನ್' ಎಂಬ ಲೇಖಕನ ಪುಸ್ತಕ ಪಡೆಯಲು ೪೦ ಮೈಲಿ ದೂರ ನಡೆದು ಹೋಗಿದ್ದನಂತೆ.

ನೊಬೆಲ್ ಪಾರಿತೋಷಕ ಪಡೆದ ಡಾ. ಎಲೆಕ್ಸಿಸ್ ಕಾರೆಲ್ ತಮ್ಮ 'ರೆಫ್ಲೆಕ್ಷನ್ಸ್ ಆಫ್ ಲೈಫ್' ಎಂಬ ಗ್ರಂಥದಲ್ಲಿ ಹೀಗೆ ಹೇಳುತ್ತಾರೆ: "ಸತ್ಯದ ಮಹಾಸಾಗರದಲ್ಲಿ ಮನುಷ್ಯನು ಏನನ್ನು ಬಯಸುತ್ತಾನೋ ಅದನ್ನು ಪಡೆಯುತ್ತಾನೆ. ದೇವರಿಗಾಗಿ ಕಾತರಿಸಿದ ಅಸೆಸ್ಸಿಯ ಸಂತ ಫ್ರಾನ್ಸಿಸ್ ದೈವಸಾಕ್ಷಾತ್ಕಾರವನ್ನು ಪಡೆದ. ಸೃಷ್ಟಿಯ ಹಿನ್ನೆಲೆಯ ನಿಯಮಗಳನ್ನು ಹುಡುಕಾಡಿದ ಐನ್‌ಸ್ಟೈನ್ ವಿಶ್ವವ್ಯಾಪಕ ನಿಯಮ ಗಳನ್ನು ಕಂಡುಹಿಡಿದ."

ಮನುಷ್ಯ ಮುನ್ನಡೆಯಬೇಕಾದರೆ ಗುರಿ ಬೇಕು, ಅದಕ್ಕೆ ದಾರಿ ಯನ್ನು ಕಂಡುಕೊಳ್ಳಬೇಕು. ಇದರ ಬಗ್ಗೆ ವಿವೇಕಾನಂದರು ಸಾಕಷ್ಟು ಬರೆದಿದ್ದಾರೆ. ಬಿಥೋವನ್ ಎಂಬ ಜನ್ಮಸಿದ್ಧ ಸಂಗೀತಜ್ಞನ ಪ್ರತಿಭೆ ದೇವರ ಕೊಡುಗೆಯೆಂದು ಕೆಲವರು ಭಾವಿಸಿದ್ದರೆ, ಅವನು ಅವರಿಗೆ ಕೊಡುವ ಉತ್ತರವೇ ಬೇರೆಯಾಗಿತ್ತು : "...ಈ ಅಸಾಧಾರಣ ಪ್ರತಿಭೆ ದೇವರ ಕೊಡುಗೆ ಎನ್ನುತ್ತೀರಾ? ನೀವೂ ಈ ಕೊಡುಗೆ ಪಡೆಯಬಹುದು. ದಿನಕ್ಕೆ ಎಂಟು ಗಂಟೆಗಳ ಕಾಲ, ನಲವತ್ತು ವರ್ಷಗಳವರೆಗೆ ಪಿಯಾನೋ ಅಭ್ಯಾಸ ಮಾಡಿರಿ, ಅಷ್ಟೇ ಸಾಕು. ನೀವೂ ನನ್ನಂತೆ ಅದ್ಭುತ ಕೊಡುಗೆಯನ್ನು ಪಡೆಯುತ್ತೀರಿ."

"ಮಕ್ಕಳಿಗಾಗಿ ಸರಳ ಸುಂದರ ರೂಪದಲ್ಲಿ ಅನು ಬಂದೋಪಾಧ್ಯಾಯ ಬರೆದ 'ಬಹುರೂಪಿ ಗಾಂಧಿ' ಎಂಬ ಆಂಗ್ಲ ಭಾಷೆ ಯಲ್ಲಿರುವ ಗ್ರಂಥ ಮಕ್ಕಳು ಓದಲೇಬೇಕಾದ ಪುಸ್ತಕ. ಇದು ಪಠ್ಯ ವಾಗಬೇಕು." ಇದರಲ್ಲಿ ದಿನದಿನದ, ಕ್ಷಣಕ್ಷಣದ ಪ್ರತಿ ಕೆಲಸದಲ್ಲಿ ಹೇಗೆ ಗಾಂಧೀಜಿಯವರ ಹಿರಿಮೆ, ದೊಡ್ಡತನ ವ್ಯಕ್ತವಾಗುತ್ತದೆ ಎಂಬುದು ಚಿತ್ರಿತವಾಗಿದೆಯಂತೆ.

"ಯಾವುದೇ ಕಲೆ ಅಥವಾ ಕೆಲಸದಲ್ಲಿ ನಮಗೆ ಪೂರ್ಣ ದಕ್ಷತೆ ಬರಬೇಕಾದರೆ ಅದರ ಕಾರ್ಯವಿಧಾನ ನಮ್ಮ ಸುಪ್ತಮನಸ್ಸಿನಲ್ಲಿ ಸರಿಯಾಗಿ ನೆಲೆ ನಿಲ್ಲಬೇಕು."

ಪ್ರಸಿದ್ಧ ಜನನಾಯಕ, ಉದ್ಯಮಿಯೊಬ್ಬ ತನ್ನ ಕೋಣೆಯ ಮೇಜಿನ ಕೊನೆಯ ತುದಿಗೆ **'ನನ್ನ ಸಮಯ ಅಮೂಲ್ಯವಾಗಿದೆ'** ಎಂಬ ಪುಟ್ಟ ಫಲಕ ಹಾಕಿದ್ದನಂತೆ. ದಿನಕ್ಕೆ ಹದಿನಾರು ಗಂಟೆ ಕೆಲಸ ಮಾಡುತ್ತಿದ್ದನಂತೆ. "ನೆನಪಿನಲ್ಲಿಡಿ, ಸಮಯದ ಸದ್ವಿನಿಯೋಗವೇ ಯಶಸ್ಸಿನ ಗುಟ್ಟು." ಹೆಚ್ಚಿನ ಸಮಯ ತಲೆಹರಟೆಯಲ್ಲಿ, ಮೋಜಿನಲ್ಲಿ ಕಳೆದು, ನಂತರ ಪಶ್ಚಾತ್ತಾಪಪಡುವ ವಿದ್ಯಾರ್ಥಿಗಳು ತಮ್ಮ ಸಮಯದ ಬೆಲೆಯನ್ನು ಅರಿಯಬೇಕು. "ನೀವು ಗಡ್ಡವನ್ನೇಕೆ ಕ್ಷೌರ ಮಾಡಿಕೊಳ್ಳುತ್ತಿಲ್ಲ?" ಎಂದು ಮಿತ್ರರೊಬ್ಬರು ಕೇಳಿದಾಗ ಪ್ರಸಿದ್ಧ ನಾಟಕಕಾರ ಜಾರ್ಜ್ ಬರ್ನಾರ್ಡ್ ಶಾ ಉತ್ತರಿಸಿದರಂತೆ, "ಗಡ್ಡ ಕ್ಷೌರ ಮಾಡಿದರೆ ಸಮಯ ಹಾಳಾಗುತ್ತದೆ. ನಾನು ದಿನಕ್ಕೆ ನಾಲ್ಕು ನಿಮಿಷಗಳಂತೆ ನನ್ನ ಜೀವನದಲ್ಲಿ ಹತ್ತು ತಿಂಗಳು ಗಳಿಸಿದ್ದೇನೆ."

**'ಶಕ್ತಿಯೇ ಜೀವನ, ದುರ್ಬಲತೆಯೇ ಮರಣ.'** ಇದು ದೊಡ್ಡ ಸತ್ಯ. "ಶಕ್ತಿಯೇ ಸೌಭಾಗ್ಯ, ಅಮರತೆಯ ಒಳಗುಟ್ಟು. ದುರ್ಬಲತೆಯಾದರೋ ಚಿಂತೆ ದುಃಖಗಳ ಮೂಲ" ಎಂದು ವಿವೇಕಾನಂದರು ಸಾರಿದರು. "ಬಲಿಷ್ಠರಾಗಿರಿ, ಕಬ್ಬಿಣದ ಮಾಂಸ ಖಂಡ, ಉಕ್ಕಿನ ನರಮಂಡಲ, ವಿದ್ಯುತ್ತಿನ ಇಚ್ಛಾಶಕ್ತಿ ಬಲ – ಇವುಗಳನ್ನು ಬೆಳೆಸಿಕೊಂಡು ನಿಮ್ಮ ಕಾಲ ಮೇಲೆ ನಿಲ್ಲಿರಿ" ಎಂದು ಅವರು ಯುವಕರನ್ನು ಹುರಿದುಂಬಿಸಿದರು.

**ದುರ್ಬಲರೇ ಬಲಿಪಶುಗಳಾಗುತ್ತಾರೆ.** ಕುದುರೆ, ಆನೆ, ಹುಲಿಗಳನ್ನು ಯಾರೂ ಬಲಿಕೊಡುವದಿಲ್ಲ. ಆದ್ದರಿಂದ ನಾವು ಕುರಿಗಳಾಗಬಾರದು. ಪುರುಷಸಿಂಹರಾಗಬೇಕು.

**ಯೋಚನೆಯೇ ರೂವಾರಿ.** ಪ್ರಗತಿಪಥದಲ್ಲಿ ನಡೆಯಬೇಕೆನ್ನುವ ಯಾವ ವ್ಯಕ್ತಿಯೇ ಆಗಲಿ, 'ಯೋಚನೆ'ಯ ಈ ಮಹಾಶಕ್ತಿಯನ್ನು ಅರ್ಥ ಮಾಡಿಕೊಳ್ಳಬೇಕು. "ನಿಮ್ಮ ಮನಸ್ಸಿನಲ್ಲಿಯ ಪ್ರಬಲ ಯೋಚನೆ ನಿಮ್ಮ ಮೇಲೆ ಮಾತ್ರವಲ್ಲ, ಸಮೀಪದಲ್ಲಿರುವ ಇತರರ ಮೇಲೂ ಪ್ರಭಾವ ಬೀರುತ್ತದೆ." ಮಹರ್ಷಿ ಶ್ರೀಅರವಿಂದರು ಹೇಳುತ್ತಾರೆ, "ಯೋಚನೆಗಳು ಅಲೆಗಳಂತೆ ಚಲಿಸುತ್ತವೆ. ತಮಗೆ ವ್ಯಕ್ತವಾಗಲು ಅನುಕೂಲವಾದ ಮನಸ್ಸನ್ನು ಹುಡುಕುತ್ತವೆ" ಎಂದು.

ಸತತ ಅಭ್ಯಾಸದಿಂದ ಅದ್ಭುತಗಳನ್ನು ಸಾಧಿಸಬಹುದು. ವೇದೋಪನಿಷತ್ತುಗಳನ್ನು ಶಿಷ್ಯರು ಕಂಠಪಾಠ ಮಾಡುತ್ತಿದ್ದರು.

ತಲೆತಲಾತರದಿಂದ ಸನಾತನ ಜ್ಞಾನ ಹೀಗೆ ಉಳಿದುಬಂದಿರುವುದಕ್ಕೆ ಅಭ್ಯಾಸವೇ ಕಾರಣ.

'ಮಕ್ಕಳ ಸ್ಕೂಲ್ ಮನೆಯಲ್ಲಲ್ವೇ', 'ಹಿರಿಯಕ್ಕನ ಚಾಳಿ ಮನೆಮಂದಿಗೆ', 'ಮೂರು ವರ್ಷದ ಬುದ್ಧಿ ನೂರು ವರ್ಷದವರೆಗೆ' – ಇವು ಅನುಭವದ ಮಾತುಗಳು. ಮಕ್ಕಳಿಗೆ ಒಳ್ಳೆಯ ಸಂಸ್ಕಾರ ನೀಡಬೇಕು. ಮಕ್ಕಳಿಗೆ ಕತೆ ಎಂದರೆ ಪಂಚಪ್ರಾಣ. ಸಂಶೋಧಕರ, ವಿಜ್ಞಾನಿಗಳ, ಸಾಹಸಿಗಳ, ಉದ್ಯಮಶೀಲ ವ್ಯಕ್ತಿಗಳ, ಸ್ವಾರ್ಥತ್ಯಾಗಿಗಳ, ಕರ್ಮವೀರರ, ದೇಶಪ್ರೇಮಿಗಳ, ಸಮಾಜಸೇವಕರ, ಸಾಧುಸಂತರ ಜೀವನಗಾಥೆಯನ್ನು ಮಕ್ಕಳಿಗೆ ಬಿಂಬಿಸುವಂತೆ ಹೇಳಬೇಕು.

ಆತ್ಮವಿದ್ಯೆಯ ಅಭ್ಯಾಸದ ಆವಶ್ಯಕತೆ ಇಂದು ಹೆಚ್ಚಾಗಿದೆ. "ನಮ್ಮ ವ್ಯಕ್ತಿತ್ವವನ್ನು ರೂಪಿಸುವ ಹಂಬಲ ನಮಗಿದ್ದರೆ, ನಮ್ಮ ಏಳ್ಗೆಯ ಶಿಲ್ಪಿ ನಾವೇ ಆಗಬೇಕೆಂದಿದ್ದರೆ, 'ಸಿಂಹಾವಲೋಕನ'ದ ಅಭ್ಯಾಸವನ್ನು ರೂಡಿಸಿಕೊಳ್ಳಬೇಕು ಎಂಬುದು ಅನುಭವಿಗಳ ಆದೇಶ."

**'ಸಹನೆಯಿಂದ ಸಿದ್ಧಿ'.** ಈ ಬಗ್ಗೆ, ಕ್ರಿಸ್ತಪೂರ್ವ ೩೮೪ರಲ್ಲಿ ಗ್ರೀಸ್ ದೇಶದಲ್ಲಿ ಜನಿಸಿದ ಡಿಮೊಸ್ತನೀಸನ ಕತೆ ರೋಚಕವಾಗಿದೆ. ಇವನು ಜನಿಸಿದಾಗ ಜ್ಯೋತಿಷಿಗಳು, "ಇವನೊಬ್ಬ ಸಾಮಾನ್ಯ ಮನುಷ್ಯನಾಗಿ ಬಾಳುತ್ತಾನೆ" ಎಂದಿದ್ದರಂತೆ. ಉಗ್ಗುದನಿಯ, ಕುಗ್ಗುನುಡಿಯ ಈ ಹುಡುಗ ರೋಗಪೀಡಿತನಾಗಿಯೇ ಬೆಳೆದ. ಬಾಲ್ಯದಲ್ಲಿ ತಂದೆಯನ್ನು ಕಳೆದುಕೊಂಡು ತಬ್ಬಲಿಯಾದ. ಇವನ ಆಸ್ತಿಯನ್ನು ಸ್ವಂತ ಚಿಕ್ಕಪ್ಪನೇ ಎತ್ತಿಹಾಕಿದ. ಇವನು ನ್ಯಾಯಾಲಯದ ಕದ ತಟ್ಟಿದ. ಆದರೆ ಇವನಿಗೆ ನ್ಯಾಯ ದೊರೆಯಲಿಲ್ಲ. ಆ ಕಾಲದ ಪ್ರಸಿದ್ಧ ವಾಗ್ಮಿಯೊಬ್ಬನ ಮಾತಿನ ಮೋಡಿಗೆ ಮರುಳಾಗಿ ತಾನೂ ವಾಗ್ಮಿಯಾಗಬೇಕೆಂದು ದೃಢಸಂಕಲ್ಪ ಮಾಡಿದ. ಬಾಯಿ ತೆರೆದರೆ ಉಗ್ಗು ಅವನನ್ನು ಬಾಧಿಸುತ್ತಿತ್ತು. ಒಬ್ಬ ವೈದ್ಯನ ಸಲಹೆಯಂತೆ ನಾಲಗೆಯ ಮೇಲೆ ಬೆಣಚುಕಲ್ಲನ್ನು ಇಟ್ಟುಕೊಂಡು ಸ್ಪಷ್ಟವಾಗಿ ಮಾತಾಡಲು ಕಲಿತ. ಎತ್ತರವಾದ ದಿಣ್ಣೆ ಬೆಟ್ಟಗಳನ್ನು ಏರುತ್ತ, ಇಳಿಯುತ್ತ, ದೀರ್ಘವಾಗಿ ಉಸಿರೆಳೆಯುವ ಅಭ್ಯಾಸ ಮಾಡಿದ. ಉದ್ದವಾದ ವಾಕ್ಯಗಳನ್ನು ತಡೆಯಿಲ್ಲದೇ ಉಚ್ಚರಿಸತೊಡಗಿದ. ದಿನವೂ ಸಮುದ್ರದ ದಂಡೆಯ ಮೇಲೆ ನಿಂತು ಸಮುದ್ರದ ಘೋಷವನ್ನು ಮೀರಿಸುವ ಧ್ವನಿಯಿಂದ ಮಾತನಾಡಲು ಅಭ್ಯಾಸ ಮಾಡಿದ. ಕಾಯಿದೆ ಕಾನೂನು ಗ್ರಂಥಗಳನ್ನು, ಗ್ರೀಕ್ ಮಹಾಕಾವ್ಯಗಳನ್ನು ದಿನಕ್ಕೆ ಹದಿನಾರು ತಾಸಿಗೆ ಮೀರಿ ಅಭ್ಯಾಸ ಮಾಡಿದ. ಅಧ್ಯಯನ ಕಾಲಕ್ಕೆ ಇವನು ಜನರೊಂದಿಗೆ ಬೆರೆಯುತ್ತಿರಲಿಲ್ಲ. ಜನರೊಂದಿಗೆ ವ್ಯವಹಾರ ಕಡಿಮೆಗೊಳಿಸಲು ಅರ್ಧತಲೆ ಬೋಳಿಸಿಕೊಂಡು, ವಿಕಾರರೂಪಿಯಾಗಿ, ನೆಲಮನೆಯಲ್ಲಿಯೇ ಏಕಾಕಿಯಾಗಿ ಹೆಚ್ಚಿನ ಸಮಯ ಕಳೆಯುತ್ತಿದ್ದ. ಪ್ರಭಾವಿ ಹಾವಭಾವ ಪ್ರದರ್ಶಿಸಲಿಕ್ಕಾಗಿ, ಪರಿಣಾಮಕಾರಿ ಅಂಗಾಭಿನಯ ಪರಿಣತಿಗಾಗಿ ದೊಡ್ಡ ನಿಲುವು ಗನ್ನಡಿಯ ಮುಂದೆ ನಿಂತು ಗಂಟೆಗಟ್ಟಲೆ ರಂಗತಾಲೀಮು (ರಿಹರ್ಸಲ್) ಮಾಡುತ್ತಿದ್ದ. ಮೂರು ವರ್ಷಗಳ ಅಜ್ಞಾತವಾಸದ ತರುವಾಯ ಹೊರಬಿದ್ದಾಗ ಅವನೊಬ್ಬ ಜ್ಞಾನನಿಧಿಯಾಗಿದ್ದ. ಇವನ ಬಗ್ಗೆ ಫಿಲಿಪ್ ದೊರೆ ಹೇಳುತ್ತಿದ್ದನಂತೆ, "ಇಡೀ ಜಗತ್ತನ್ನೇ ಜಯಿಸಬಹುದು; ಆದರೆ, ಡೆಮೋಸ್ತನೀಸನ ನಾಲಿಗೆಯನ್ನು ಜಯಿಸುವುದು ಅಸಾಧ್ಯ" ಎಂದು. ವಾಗ್ದೇವಿ ಅವನ ನಾಲಗೆಯ ಮೇಲೆ ನರ್ತಿಸುತ್ತಿದ್ದಳು. ಇದೆಲ್ಲ ಇವನ ದೃಢಸಂಕಲ್ಪದ ಫಲ.

ಕಡುಬಡತನ, ವಿಷಮ ಪರಿಸರದಲ್ಲಿ ಬೆಳೆದು ಅಸಾಧ್ಯವನ್ನು ಸಾಧಿಸಿದವರಲ್ಲಿ ಡಾ. ಬಾಬಾಸಾಹೇಬ ಅಂಬೇಡ್ಕರರೂ ಒಬ್ಬರು. ಅವರು ಲಂಡನ್‌ನಲ್ಲಿ ಅಭ್ಯಾಸಮಾಡುತ್ತಿದ್ದಾಗ, ಲೈಬ್ರರಿಯ ಬಾಗಿಲು ಹಾಕುವ ಸಮಯವಾಗಿ, ಜವಾನ ಬಂದು ಎಚ್ಚರಿಸುವವರೆಗೂ ತಮ್ಮ ಓದಿನಲ್ಲಿ ಮಗ್ನರಾಗಿರುತ್ತಿದ್ದರಂತೆ. ಯಾರೂ ಕಂಡರಿಯದ ಜಗತ್ತನ್ನು ಕಂಡುಹಿಡಿದ ಕೊಲಂಬಸನ ಸಾಹಸ ಎಂಥದಿರಬೇಕು! ವಿದ್ಯುದ್ದೀಪ ಆವಿಷ್ಕಾರಗೊಳಿಸಿದ ಥಾಮಸ್ ಎಡಿಸನ್ ಒಂಬೈನೂರು ಬಾರಿ ತನ್ನ ಪ್ರಯೋಗದಲ್ಲಿ ವಿಫಲನಾಗಿದ್ದ. ಆದರೂ ಧೈರ್ಯಗೆಡದೆ ಹೋರಾಡಿ ಜಯಗಳಿಸಿದ! ಇಂಥ ಅಸಂಖ್ಯ ಉದಾಹರಣೆಗಳನ್ನು ಲೇಖಕರು ಈ ಅಧ್ಯಾಯದಲ್ಲಿ ನೀಡುತ್ತಾರೆ.

**ವಯಸ್ಸಿಗೂ ಯಶಸ್ಸಿಗೂ ಸಂಬಂಧ ಕಲ್ಪಿಸಲು ಸಾಧ್ಯವಿಲ್ಲ.** 'ಇಂಗ್ಲೆಂಡಿನ ಪಿಟ್ಸ್ ಎಂಬಾತ ತನ್ನ ೨೪ನೆಯ ವಯಸ್ಸಿಗೆ ಪ್ರಧಾನ ಮಂತ್ರಿಯಾಗಿದ್ದರೆ, ಇನ್ನೊಬ್ಬ ಪ್ರಸಿದ್ಧ ರಾಜಕಾರಣಿ ಗ್ಲಾಡ್‌ಸ್ಟೋನ್ ಪ್ರಧಾನಿಯಾದದ್ದು ತನ್ನ ೮೩ನೆಯ ವಯಸ್ಸಿನಲ್ಲಿ. ಜರ್ಮನ್ ಕವಿ ಗಯಟೆ (ಕಾಳಿದಾಸನ ಶಾಕುಂತಲ ನಾಟಕವನ್ನು ಓದಿ ತನ್ನ ತಲೆಯ ಮೇಲಿಟ್ಟುಕೊಂಡು ಕುಣಿದಾಡಿದ ಖ್ಯಾತಿಯ ಕವಿ) ತನ್ನ ಹತ್ತನೇ ವಯಸ್ಸಿನಲ್ಲಿ ಕವನ ಬರೆಯಲು ಪ್ರಾರಂಭಿಸಿದ, ಆದರೆ ಅವನ ಅಮೂಲ್ಯ ಕೃತಿ 'ಫೌಸ್ಟ್' ಅನ್ನು ರಚಿಸಿದ್ದು ತನ್ನ ೮೦ನೆಯ ವಯಸ್ಸಿನಲ್ಲಿ. ಸಂತ ಜ್ಞಾನೇಶ್ವರರು ಭಗವದ್ಗೀತೆಯ ವ್ಯಾಖ್ಯಾನವಾದ ತಮ್ಮ 'ಜ್ಞಾನೇಶ್ವರಿ'ಯನ್ನು ರಚಿಸಿದ್ದು ೧೩ನೆಯ ವಯಸ್ಸಿನಲ್ಲಿ. ಇಂಗ್ಲಿಷ್ ಕವಿ ಕೋಲ್‌ರಿಜ್ ತನ್ನ ಪ್ರಸಿದ್ಧ ಕಾವ್ಯ 'ಏನ್ಶಿಯಂಟ್ ಮ್ಯಾರಿನರ್' ಬರೆದಾಗ ಅವನಿಗೆ ೨೫ ವರ್ಷ. ಇಟಾಲಿಯನ್ ಕಲಾವಿದ ಲಿಯೋನಾರ್ಡೊ ಡಾ ವಿಂಚಿಯ ಪ್ರಸಿದ್ಧ ಕಲಾ ಕೃತಿ 'ಲಾಸ್ಟ್ ಸಪ್ಪರ್' ರೂಪ ತಾಳಿದ್ದು ಅವನ ೭೭ನೆಯ ವಯಸ್ಸಿನಲ್ಲಿ. ದೇಹಾರೋಗ್ಯ ಮತ್ತು ಸ್ವಸ್ಥ ಶರೀರವೇ ಮಹಾ ಯಶಸ್ಸಿಗೆ ಕಾರಣ ಎನ್ನಬಹುದೇ? ಮಿಲ್ಟನ್ ಕುರುಡನಾಗಿದ್ದ (ಸೂರದಾಸನೂ ಕುರುಡನಾಗಿದ್ದ). (ಕುಳ್ಳ) ನೆಪೋಲಿಯನ್ ಚರ್ಮರೋಗಪೀಡಿತನಾಗಿದ್ದ. ಜ್ಯೂಲಿಯಸ್ ಸೀಝರ್‌ಗೆ ಮೂರ್ಛೆರೋಗವಿತ್ತು. ಖ್ಯಾತ ಸಂಗೀತಗಾರನಾಗಿದ್ದ ಬಿಥೋವನ್ ಸ್ವತಃ ಕಿವುಡನಾಗಿದ್ದ.

"ಯಾರು ಇತರರಿಗಾಗಿ ದುಡಿಯುವರೋ ಅವರೇ ಅತ್ಯಂತ ಸುಖಿಗಳು. ಇತರರಿಗೆ ಯಾವುದೇ ಸಹಾಯ ಮಾಡದವರು ಅತ್ಯಂತ ದುಃಖಿಗಳು." ಈ ಮಾತಿನಲ್ಲಿ ಕಳಕಳಿ ಇದೆ. ಆಪ್ತ ಸಲಹೆ ನೀಡುವ ಒಂದು ವಿಶಿಷ್ಟ ಶೈಲಿ ಇದೆ.

"ಯಾವುದೇ ಕ್ಷೇತ್ರದಲ್ಲಿ ಅತ್ಯುನ್ನತ ಮಟ್ಟದ ಸಿದ್ಧಿಯನ್ನು ಸಾಧಿಸಬೇಕಾದರೆ ಅದು ಪ್ರಾಮಾಣಿಕ ಪ್ರಯತ್ನದಿಂದ ಸಾಧ್ಯ" ಎಂಬ ಮಾತನ್ನು ಲೇಖಕರು ಮನಕ್ಕೆ ನಾಟುವಂತೆ ಹೇಳುತ್ತಾರೆ. "ಮೋಸ ವಂಚನೆಯಿಂದ ಯಾವ ಮಹತ್ಕಾರ್ಯವೂ ಸಾಧ್ಯವಾಗಿಲ್ಲ. ಸತ್ಕರ್ಮದಿಂದಲೇ ಶ್ರೇಯಸ್ಸು ಎಂಬ ದೃಢಸಂಕಲ್ಪ ನಮ್ಮಲ್ಲಿ ಉದಿಸಬೇಕು" ಎಂಬ ಮಾತನ್ನೂ ಹೇಳುತ್ತಾರೆ. ಇಂಥ ಮಾತು ಯುವಜನಾಂಗಕ್ಕೆ ದಾರಿದೀಪವಾಗುವುದರಲ್ಲಿ ಸಂದೇಹವಿಲ್ಲ.



ಸ್ವಾಮಿ ಮುಕ್ತಿದಾನಂದ

# ಭಗವಂತನ ಅಸ್ತಿತ್ವದ ಪ್ರಮಾಣಪುರುಷರಾಗಿ ಶ್ರೀರಾಮಕೃಷ್ಣರು



**ವೈ**ಚಾರಿಕ ಮನಸ್ಸಿನವರಿಗೆ 'ದೇವರು' ಎಂಬ ಪದವು ಒಂದು ಒಗಟಿನಂತೆ ಕಾಣಬಹುದು. ಇಂದ್ರಿಯಗಳ ಚೌಕಟ್ಟಿನಲ್ಲಿಯೇ ಬಾಳುತ್ತಿರುವವರಿಗೆ ಇದೊಂದು ವಿಸ್ಮಯದಾಯಕ ಪದವೆಂದು ತೋರಬಹುದು. ಆದರೆ ಧಾರ್ಮಿಕ ಮನೋಭಾವವುಳ್ಳ ಜನರು, ತಮ್ಮ ಶ್ರದ್ಧೆಯ ಬಲದಿಂದ ದೇವರನ್ನು ಹೆಚ್ಚು ವಾಸ್ತವವೆಂದು ಭಾವಿಸುತ್ತಾರೆ. ಆದರೆ ಶ್ರೀರಾಮಕೃಷ್ಣರ ಪ್ರಭಾವವು ಎಷ್ಟಿತ್ತೆಂದರೆ, ಭಗವಂತನ ಅಸ್ತಿತ್ವದ ವಿಷಯದಲ್ಲಿ ನಿಜವಾಗಿಯೂ ಗಂಭೀರಭಾವನೆ ಹೊಂದಿರುವ ಆಧ್ಯಾತ್ಮಿಕ ಸಾಧಕರು ಮಾತ್ರವಲ್ಲದೆ, ನಾಸ್ತಿಕರು ಮತ್ತು ಅಜ್ಞೇಯವಾದಿಗಳು ಸಹ ಭಗವಂತನ ಅಸ್ತಿತ್ವದಲ್ಲಿ ಶ್ರದ್ಧೆಯಿಡುವಂತಾಯಿತು. ಅಷ್ಟು ಮಾತ್ರವಲ್ಲ, ಅಂಥ ಜನರು ಭಗವಂತನ ಅಸ್ತಿತ್ವದ ಸತ್ಯವನ್ನು ಅನ್ವೇಷಿಸುವ ಸಾಧ್ಯತೆಯನ್ನು ಪರಿಗಣಿಸುವಂತೆಯೂ ಆಯಿತು. ಈ ಅರ್ಥದಲ್ಲಿ ಶ್ರೀರಾಮಕೃಷ್ಣರು ಗಂಭೀರ ಆಧ್ಯಾತ್ಮಿಕ ಸಾಧಕರಿಗೆ ಸ್ಫೂರ್ತಿದಾಯಕರು ಮಾತ್ರವಲ್ಲ, ಆಯಾಸಗೊಂಡ ಪ್ರಯಾಣಿಕನಂತೆ ಜೀವಿಸುತ್ತ, ಜಗತ್ತನ್ನು ಭಗವಂತನಿಲ್ಲದ ಮರಳುಭೂಮಿಯೆಂದು ಭಾವಿಸುವ ವಿಚಾರವಾದಿಗಳಿಗೂ ಅವರು ಮರುಭೂಮಿಯ ಓಯಸಿಸ್ಸಿನಂತೆ ಪ್ರೇರಣಾಸ್ರೋತವಾಗಿ ಕಂಡುಬರುತ್ತಾರೆ.

**ಶ್ರೀರಾಮಕೃಷ್ಣರ ಜೀವನವು ಭಗವಂತನನ್ನು ಮುಖಾಮುಖಿಯಾಗಿ ತೋರಿಸುತ್ತದೆ ಎಂದು ಮಹಾತ್ಮ ಗಾಂಧಿ ಅವರು ಹೇಳುತ್ತಾರೆ. ಹೀಗೆ ಅವರ ಜೀವನವು ದೇವರ ಅಸ್ತಿತ್ವಕ್ಕೆ ಪ್ರಾಮಾಣಿಕವೂ ಅಧಿಕೃತವೂ ಆದ ಪ್ರಮಾಣವಾಗಿದೆ. ಈ ಅಂಶವನ್ನು ವಿದ್ವತ್ಪೂರ್ಣವಾಗಿ ವಿಶ್ಲೇಷಿಸಿರುವ ಸ್ವಾಮೀಜಿಯವರು ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಅಧ್ಯಕ್ಷರು. ಶಿಕ್ಷಣ ಕ್ಷೇತ್ರದಲ್ಲಿ ಅಪಾರ ಅನುಭವವಿರುವ ಇವರು ಉತ್ತಮ ವಾಗ್ಮಿಗಳು ಹಾಗೂ ಬರಹಗಾರರು.**

ಶ್ರೀರಾಮಕೃಷ್ಣರ ಜೀವನವು ವಿಶಿಷ್ಟವಾದುದು. ಅದು ಇತ್ತೀಚಿನ ದಿನಗಳಲ್ಲಿ ಕಂಡುಬರುವ ಅತ್ಯಂತ ಸ್ಫೂರ್ತಿಭರಿತ ಆಧ್ಯಾತ್ಮಿಕ ಅನುಭಾವದ ಅಧಿಕೃತ ದಾಖಲೆ. ಇದನ್ನು ಯಾರೂ ಸಂದೇಹಿಸುವಂತಿಲ್ಲ. ಶ್ರೀರಾಮಕೃಷ್ಣರ ಜೀವನಚರಿತ್ರೆಯಲ್ಲಿ ಅವರ ಸ್ವಂತ ಆಧ್ಯಾತ್ಮಿಕ ಅನುಭವಗಳನ್ನು ಸಾಕಷ್ಟು ಸಂಖ್ಯೆಯಲ್ಲಿ ನೋಡುತ್ತೇವೆ. ಹಾಗೆಯೇ ಅವರ ಶಿಷ್ಯರು ಮತ್ತು ಭಕ್ತರ ಜೀವನದಲ್ಲಿಯೂ ಇಂಥ ಬೇಕಾದಷ್ಟು ಘಟನೆಗಳು ಕಂಡುಬರುತ್ತವೆ. ಈ ಎಲ್ಲ ಅನುಭವಗಳಲ್ಲಿ ದಿವ್ಯತೆಯನ್ನು ಕಂಡುಕೊಳ್ಳುವ ಹಲವು ಮಾರ್ಗಗಳು, ವಿಧಾನಗಳು ಹಾಗೂ ದಿವ್ಯತೆಯ ಹಲವು ರೂಪಗಳು ಅತ್ಯಂತ ಸ್ಫುಟವಾಗಿ ಅಭಿವ್ಯಕ್ತಗೊಂಡಿವೆ. ಇದಲ್ಲದೆ, ಶ್ರೀರಾಮಕೃಷ್ಣರ ದಿವ್ಯತೆ ಅವರ ಸ್ವಂತ ಜೀವನದಲ್ಲಿ ಮತ್ತು ಅವರ ಶಿಷ್ಯರ ಜೀವನಗಳಲ್ಲಿ ಪ್ರಖರವಾಗಿ ಪ್ರಕಟಗೊಂಡಿದೆ. ಇವೆಲ್ಲವೂ ಭಗವಂತನ ಅಸ್ತಿತ್ವದ ಬಗ್ಗೆ ಯಾರಿಗಾದರೂ ಮನದಟ್ಟು ಮಾಡಿಕೊಡುವುದಕ್ಕೆ ಬೇಕಾದಷ್ಟು ಸಾಕು. ಈ ಸಂನ್ಯಾಸಿ ಮತ್ತು ಗೃಹಸ್ಥಭಕ್ತರು, ತಮ್ಮ ಮಧ್ಯೆ ವಾಸಿಸುತ್ತಿರುವ ಈ ಗುರುದೇವರು ಮಾನವರೂಪದಲ್ಲಿ ಇರುವ ಭಗವಂತನೇ ಎಂಬುದನ್ನು ಸುಸ್ಪಷ್ಟವಾಗಿ ತಮ್ಮ ಅನುಭವಕ್ಕೆ ತಂದುಕೊಂಡಿದ್ದರು. ಶ್ರೀರಾಮಕೃಷ್ಣರು ಅತ್ಯುನ್ನತ ಆಧ್ಯಾತ್ಮಿಕ ಸ್ಥಿತಿಯಾದ ಸಮಾಧಿಯನ್ನು ಸುತ್ತಲಿನ ಜನರು ನೋಡುತ್ತಿರುವಂತೆಯೇ ಮತ್ತೆ ಮತ್ತೆ ಅನುಭವಿಸುತ್ತಿದ್ದರು. ಹೀಗಾಗಿ ಅವರ ದಿವ್ಯಜೀವನವು ಎಲ್ಲರ ದೃಷ್ಟಿಗೋಚರವಾದ ಪಾರದರ್ಶಕತೆಯಿಂದ ಕೂಡಿತ್ತು. ಆಧ್ಯಾತ್ಮಿಕತೆಯ ಇಂಥ ಅದ್ಭುತ ದೃಶ್ಯವು ಆಧುನಿಕ ಕಾಲದಲ್ಲಿ ಎಂದೂ ಕಾಣಬಂದಿಲ್ಲವೆಂದೇ ಹೇಳಬೇಕು. ಹೀಗಾಗಿ ಶ್ರೀರಾಮಕೃಷ್ಣರ ಜೀವಿತವು ಭಗವದವತರಣದ ಸುಲಭಗ್ರಾಹ್ಯ ಉದಾಹರಣೆಯೆನ್ನಬಹುದು.

ಭಗವಂತನ ಅಸ್ತಿತ್ವ ಮತ್ತು ಜೀವನದ ಪರಮಾರ್ಥಗಳು ಭಗವಂತನ ಜ್ಞಾನ ಮತ್ತು ಅನುಭವದಲ್ಲಿಯೇ ಇದೆ ಎನ್ನುವುದನ್ನು ಶ್ರೀರಾಮಕೃಷ್ಣರ ಜೀವನವು ಸ್ಪಷ್ಟಪಡಿಸುತ್ತದೆ. ಮಾನವ ಜೀವನವು ಅನೇಕ ಹೋರಾಟಗಳಿಂದ ಮತ್ತು ಕಷ್ಟನಷ್ಟಗಳಿಂದ ಕೂಡಿರಬಹುದು. ಆದರೆ

ಭಗವತ್ಸಾಕ್ಷಾತ್ಕಾರದಲ್ಲಿ ಮಾತ್ರವೇ ಜೀವನದ ಪರಮಾರ್ಥವು ನೆಲೆಗೊಂಡಿದೆ. ಇದು ಶ್ರೀರಾಮಕೃಷ್ಣರ ಜೀವನಚರಿತ್ರೆಯನ್ನು ಬರೀ ಮೇಲುಮೇಲಕ್ಕೆ ಓದಿ ವಿಶ್ಲೇಷಿಸಿದರೂ ವೇದ್ಯವಾಗುವ ವಾಸ್ತವಾಂಶ. ಹಾಗೆ ನೋಡಿದರೆ, ಎಲ್ಲ ಮಹಾತ್ಮರೂ ಈ ಆದರ್ಶವನ್ನೇ ತಮ್ಮ ಬಾಳಿನ ಧ್ಯೇಯವನ್ನಾಗಿ ಮಾಡಿಕೊಂಡಿದ್ದರು. ಆದರೆ ಶ್ರೀರಾಮಕೃಷ್ಣರ ವೈಶಿಷ್ಟ್ಯ ಇರುವುದು ಭಗವತ್ಸಾಕ್ಷಾತ್ಕಾರದ ಬಗ್ಗೆ ಎಂದಿಗೂ ರಾಜಿ ಮಾಡಿಕೊಳ್ಳದೆ ಇದಕ್ಕೆ ಮಾತ್ರವೇ ಒತ್ತನ್ನು ನೀಡಿರುವ ಧೋರಣೆ. ಭಗವತ್ಸಾಕ್ಷಾತ್ಕಾರದ ವಿಷಯದಲ್ಲಿ ಅವರದು ಹೃತ್ಪೂರ್ವಕವಾದ ಮತ್ತು ಅಖಂಡವಾದ ದೃಷ್ಟಿಕೋನ. ಈ ಬಗೆಯ ಏಕಾಗ್ರ ಮನಸ್ಸಿನಿಂದ ಅದಕ್ಕಾಗಿ ಅವರು ಸಾಧನೆಗೈದರು. ಹಾಗೂ ಮನುಷ್ಯನೊಬ್ಬನು ಈ ದಿಶೆಯಲ್ಲಿ ನಡೆಯಬಹುದು ಎಂಬ ಸಾಧ್ಯತೆಯನ್ನು, ಅತ್ಯಂತ ಖಚಿತ ರೂಪದಲ್ಲಿ ತಮ್ಮ ಜೀವನ ದುದ್ದಕ್ಕೂ ಸಾಬೀತುಪಡಿಸಿದರು.

**ಚರ್ಚೆಯ ವಿಷಯ:** ಭಗವಂತನು ಇದ್ದಾನೆಯೋ ಇಲ್ಲವೋ ಎನ್ನುವುದು ಪ್ರಮಾಣಬದ್ಧವಾದ ಮತ್ತು ಮುಕ್ತವಾದ ವಿಚಾರ. ಅದು ನಮ್ಮಲ್ಲಿ ತುಂಬ ಬುದ್ಧಿವಂತರು ಎನಿಸಿಕೊಂಡವರ ಮಧ್ಯೆಯೂ ಚರ್ಚೆಗೆ ಗ್ರಾಸವಾಗಬಲ್ಲುದು. ಪ್ರಾಚೀನ ಕಾಲ ದಿಂದಲೂ ಭಗವಂತನ ಅಸ್ತಿತ್ವದ ಪುರಾವೆಯ ಬಗ್ಗೆ ವಿದ್ವಾಂಸರು ಮತ್ತು ತತ್ತ್ವಶಾಸ್ತ್ರಜ್ಞರು ಚರ್ಚಿಸುತ್ತಲೇ ಬಂದಿದ್ದಾರೆ; ಈಗಲೂ ಇಂಥ ಚರ್ಚೆ ಮುಂದುವರೆಯುತ್ತಲೇ ಇದೆ.

ಆದರೆ, ಭಗವಂತನ ಅಸ್ತಿತ್ವದ ಪುರಾವೆಯ ಬಗ್ಗೆ ವಿವಾದ ಎತ್ತುವುದೇ ಅಸಂಬದ್ಧವಲ್ಲವೇ? ಪುರಾವೆಯನ್ನು ನೀಡುವುದು ಎಂದರೆ ಏನು? ಅದಕ್ಕಿಂತಲೂ ನಿರ್ದಿಷ್ಟವಾದ ಮತ್ತು ನಿತ್ಯವಾದ ಯಾವುದಾದರೂ ಒಂದರಲ್ಲಿ ಅದನ್ನು ಪ್ರತ್ಯೇಕಿಸಿ ಎತ್ತಿತೋರಿಸುವುದು. ಆದರೆ ಮಾನವನ ಮನಸ್ಸು ಸೀಮಿತವಾದುದು. ಅದು ವ್ಯಕ್ತಿಗತ ಶರೀರ, ಸಾಧಾರಣ ಇಂದ್ರಿಯಾನುಭೂತಿ ಮತ್ತು ಸಾಮಾನ್ಯ ಪ್ರಾಪಂಚಿಕ ತರ್ಕಗಳ ಜೊತೆಗೆ ತಾದಾತ್ಮ್ಯ ಹೊಂದಿದೆ. ಹೀಗಾಗಿ ಅದಕ್ಕಿಂತಲೂ ಸೂಕ್ಷ್ಮವಾದ, ಅಗಾಧವಾದ, ಉನ್ನತವಾದ ಮತ್ತು ನಿರಪೇಕ್ಷವಾದ ಭಗವದನುಭೂತಿಯನ್ನು ಮಾನವನ ಪರಿಮಿತ ಮನಸ್ಸು ಹೇಗೆ ತಾನೇ ಗ್ರಹಿಸಬಲ್ಲುದು? ಈ ಕಾರಣದಿಂದ ಭಗವಂತನ ಅಸ್ತಿತ್ವದ ಬಗ್ಗೆ ಪುರಾವೆಯನ್ನು ಮಾನವನ ಮನಸ್ಸಿನಿಂದ ಪಡೆದುಕೊಳ್ಳಲು ಹೇಗೆ ತಾನೇ ಸಾಧ್ಯವಾಗುತ್ತದೆ?

ಹಾಗಾಗಿ ಭಗವಂತನ ಅಸ್ತಿತ್ವವನ್ನು ಪ್ರಶ್ನಿಸುವ ಸಾಧಾರಣ ಮನುಷ್ಯರಿಗೆ ಮನದಟ್ಟು ಮಾಡಿಕೊಡುವುದಕ್ಕೆ ಬೇರೆಯದೇ ವಿಧಾನವಿದೆ. ಭಗವಂತನ ಬಗ್ಗೆ ನೇರವೂ ಹೃತ್ಪೂರ್ವಕವೂ ಆದ ಕಾತರತೆ ಮತ್ತು ಅದರ ಜೊತೆಜೊತೆಗೆ ಭಗವಂತನ ಸಾನ್ನಿಧ್ಯದ ಮಾನಸಿಕ ಸಂಪರ್ಕ ಮತ್ತು ಅನುಭವ – ಇದು ಮಾತ್ರವೇ ಅಂಥ ಏಕಮಾತ್ರ ವಿಧಾನವಾಗಬಲ್ಲುದು. ಶ್ರೀರಾಮಕೃಷ್ಣರು ಪಡೆದುಕೊಂಡ ಭಗವದನುಭೂತಿಯು ತರ್ಕ ಅಥವಾ ವಾದವಿವಾದಗಳಿಗೆ ಒಳಪಡುವಂಥದ್ದಲ್ಲ. ಅದು ತಾರ್ಕಿಕ ಪ್ರಮೇಯವೂ ಅಲ್ಲ. ಆದರೆ, ಜಗತ್ತಿನ ಸಾಧಾರಣ ಜನರಿಗೆ ಸಮರ್ಪಕವಾಗಿ ಅರಿವು ಮಾಡಿಸಬಹುದಾದ ಪ್ರಶ್ನಾತೀತ ಮತ್ತು ಮೂರ್ತರೂಪದ ಭಗವದನುಭೂತಿಯನ್ನೇ ಅವರು ಪಡೆದುಕೊಂಡಿದ್ದರೆಂಬುದು ನಿರ್ವಿವಾದ.

ಅಂಥ ಅನುಭೂತಿಯ ನೇರ ಸಂಪರ್ಕ ಹೊಂದಿದವರಲ್ಲಿ ಸ್ವಾಮಿ ವಿವೇಕಾನಂದರೂ ಒಬ್ಬರು. ಅವರು ತಮ್ಮ ಪ್ರಾರಂಭಿಕ ಅನ್ವೇಷಣೆ ಮತ್ತು ಭಗವಂತನ ಅಸ್ತಿತ್ವದ ಬಗೆಗಿನ ಅನ್ವೇಷಣೆಯ ಸಮಯದಲ್ಲಿ ಶ್ರೀರಾಮಕೃಷ್ಣರ ಅಪೂರ್ವ ಸಂಪರ್ಕಕ್ಕೆ ಬಂದಿದ್ದರು. ಸ್ವಾಮಿ ವಿವೇಕಾನಂದರು ಈ ಘಟನೆಯನ್ನು ಹೀಗೆ ವಿವರಿಸುತ್ತಾರೆ: "ಈ ಮಹಾನುಭಾವರು ನಮ್ಮ ದೇಶದಲ್ಲಿ ಅತಿ ಮುಖ್ಯ ವಿಶ್ವವಿದ್ಯಾನಿಲಯವಿರುವ ಭರತಖಂಡದ ರಾಜಧಾನಿಯಾದ ಕಲ್ಕತ್ತೆಯ ಸಮೀಪದಲ್ಲಿ ವಾಸಿಸುತ್ತಿದ್ದರು. ಕಲ್ಕತಾದ ವಿಶ್ವವಿದ್ಯಾನಿಲಯವು ವರ್ಷಂಪ್ರತಿ ನೂರಾರು ಜನ ಸಂಶಯವಾದಿಗಳು, ಜಡವಾದಿಗಳನ್ನು ಉತ್ಪತ್ತಿ ಮಾಡುತ್ತಿತ್ತು. ಅಂಥ ವಿಶ್ವವಿದ್ಯಾನಿಲಯದ ಹಲವು ಸಂಶಯವಾದಿಗಳೂ ಜಡವಾದಿಗಳೂ ಇವರ ಮಾತನ್ನು ಕೇಳಲು ಬರುತ್ತಿದ್ದರು. ನಾನೂ ಇವರ ವಿಷಯವನ್ನು ತಿಳಿದು ಅವರ ಮಾತನ್ನು ಕೇಳಲು ಹೋದೆ. ಅವರು ಯಾವ ಒಂದು ವಿಶೇಷವೂ ಇಲ್ಲದ ಸಾಧಾರಣ ಮಾನವರಂತೆ ಕಂಡುಬಂದರು. ಅವರ ಭಾಷೆ ಅತಿ ಸರಳವಾಗಿತ್ತು. 'ಇವರು ಮಹಾಗುರುಗಳೇ!' ಎಂದು ನಾನು ಯೋಚಿಸಿ, ಅವರ ಸಮೀಪಕ್ಕೆ ಹೋಗಿ ನಾನು ಜೀವನದಲ್ಲಿ ಎಲ್ಲವನ್ನೂ ಕೇಳುತ್ತಿದ್ದ ಪ್ರಶ್ನೆಯನ್ನೇ ಹಾಕಿದೆ: 'ಮಹಾಶಯರೇ, ನೀವು ದೇವರನ್ನು ನಂಬುವಿರಾ?' ಎಂದೆ. 'ಹೌದು' ಎಂದರು ಅವರು. 'ನೀವು ಅದನ್ನು ಸಮರ್ಥಿಸಬಲ್ಲಿರಾ?' ಎಂದೆ. 'ಹೌದು' ಎಂದರು. 'ಹೇಗೆ?' ಎಂದೆ. 'ಹೇಗೆಂದರೆ, ನಾನು ನಿನ್ನನ್ನು ಇಲ್ಲಿ ಹೇಗೆ ನೋಡುತ್ತಿರುವೆನೋ, ಹಾಗೇ ದೇವರನ್ನೂ ನೋಡುವೆ. ಆದರೆ ಇದಕ್ಕಿಂತ ಹೆಚ್ಚು ಸತ್ಯವಾಗಿ.' ಇದು ನನ್ನನ್ನು ತಕ್ಷಣವೇ ಆಕರ್ಷಿಸಿತು. 'ನಾನು ದೇವರನ್ನು ನೋಡಿರುವೆನು; ನಾನು ಪ್ರಪಂಚವನ್ನು ನೋಡುವುದಕ್ಕಿಂತ ಅತಿಶಯವಾಗಿ ಧರ್ಮದ ಸತ್ಯಗಳನ್ನು ನೋಡಬಹುದು, ಅನುಭವಿಸಬಹುದು' ಎಂದು ಧೈರ್ಯವಾಗಿ ಹೇಳಬಲ್ಲ ವ್ಯಕ್ತಿಯನ್ನು ನಾನು ಜೀವನದಲ್ಲಿ ಪ್ರಥಮಬಾರಿ ಕಂಡೆ. ಪ್ರತಿದಿನವೂ ಅವರ ಬಳಿ ಹೋಗಲು ಆರಂಭಿಸಿದೆ. ಈ ಮೂಲಕ, ಅಧ್ಯಾತ್ಮವನ್ನು ವಾಸ್ತವವಾಗಿ ಕೊಡಬಹುದು ಎಂಬುದನ್ನು ಸತ್ಯವಾಗಿ ಕಂಡೆ."

**ಭಗವದ್ದರ್ಶನವನ್ನು ಇತರರಿಗೆ ನೀಡುವ ಸಾಮರ್ಥ್ಯ:** ಶ್ರೀರಾಮಕೃಷ್ಣರು ಸ್ವತಃ ಭಗವತ್ಸಾಕ್ಷಾತ್ಕಾರವನ್ನು ಪಡೆದುಕೊಂಡದ್ದೇ ಅಲ್ಲದೆ, ಆ ದರ್ಶನವನ್ನು ಇತರರಿಗೂ ನೀಡುವ ಸಾಮರ್ಥ್ಯವನ್ನು ಹೊಂದಿದ್ದರು. ಸಂದೇಹವಾದಿಯಾಗಿದ್ದ ಯುವಕ ನರೇಂದ್ರನು (ಸ್ವಾಮಿ ವಿವೇಕಾನಂದ) ಅನಂತರ ಸ್ವಂತ ಸಾಧನೆಯಿಂದಲೂ ಮತ್ತು ಶ್ರೀರಾಮಕೃಷ್ಣರ ಪವಾಡಸದೃಶಸ್ಪರ್ಶದಿಂದಲೂ ಆಧುನಿಕ ಜಗತ್ತಿನ ಅತ್ಯಂತ ಶಕ್ತಿಶಾಲಿ ಆಧ್ಯಾತ್ಮಿಕ ವ್ಯಕ್ತಿಯಾಗಿ ಮಾರ್ಪಾಡು ಹೊಂದಿದನು. ಈ ನಿಟ್ಟಿನಲ್ಲಿ ಶ್ರೀರಾಮಕೃಷ್ಣರು ತಮ್ಮ ಅಧಿಕೃತ ಅನುಭವಗಳನ್ನು ಮತ್ತು ಖಚಿತಭಾವನೆಗಳನ್ನು ಸ್ವಾಮಿ ವಿವೇಕಾನಂದರು ಮತ್ತಿತರರಿಗೆ ಧಾರೆಯೆರೆದಿದ್ದು ಮತ್ತು ಅನಂತರದ ಇತಿಹಾಸ ಎಲ್ಲರಿಗೂ ತಿಳಿದಿರುವ ವಿಷಯವೇ ಆಗಿದೆ.

ಭಗವದನ್ವೇಷಣೆಯು ಕೇವಲ ಸೀಮಿತ, ಸಾಂಪ್ರದಾಯಿಕ, ಆಚರಣಾತ್ಮಕ ಮತ್ತು ಸೈದ್ಧಾಂತಿಕ ಇಲ್ಲವೇ ಶೈಕ್ಷಣಿಕ ಅಧ್ಯಯನದಂಥ ಪರೋಕ್ಷ ಹಂತಗಳನ್ನು ಮೀರಿಹೋಗಬಲ್ಲುದು; ಉತ್ಕಟ ವ್ಯಾಕುಲತೆ ಮತ್ತು ಆಧ್ಯಾತ್ಮಿಕ ಅನುಭೂತಿಯಲ್ಲಿ ಕೊನೆಗೊಳ್ಳುವ ಮಾನವ ವ್ಯಕ್ತಿತ್ವದ ಒಟ್ಟಾರೆ ಶಕ್ತಿಸಂಚಯದ ಬಳಕೆಯ ಅಪರೋಕ್ಷ ರೂಪ ವನ್ನು ತಳೆಯಬಲ್ಲುದು. ಇದನ್ನು ಶ್ರೀರಾಮಕೃಷ್ಣರ ಜೀವನವು ಸ್ಪಷ್ಟ ವಾಗಿ ತೋರಿಸಿಕೊಡುತ್ತದೆ. ಅವರ ವ್ಯಕ್ತಿತ್ವ ಮತ್ತು ಜೀವನವು ಮೇಲುನೋಟಕ್ಕೆ ಯಾವುದೇ ಧಾರ್ಮಿಕ ಬಾಹ್ಯಪ್ರದರ್ಶನವಿಲ್ಲದೆ ಸರಳರೂಪವಾಗಿರುವಂತೆ ತೋರಿಬರುತ್ತದೆ. ಆದರೆ, ಅವರ ಆಂತರಿಕ ಜೀವನವು ಆಧ್ಯಾತ್ಮಿಕ ಸಮೃದ್ಧಿಯಿಂದ ಕೂಡಿತ್ತು. ಅದರ ಆಧ್ಯಾತ್ಮಿಕ ಚಿಲುಮೆಯ ಶಕ್ತಿಶಾಲಿ ಹರಿವು ಇಂದು ಎಲ್ಲ ದಿಕ್ಕುಗಳಲ್ಲಿಯೂ ಓತಪ್ರೋತವಾಗಿ ವ್ಯಾಪಿಸಿರುವುದನ್ನು ಕಣ್ಣಾರೆ ಕಾಣಬಹುದು. ಇದು ಅವರ ನಿಕಟ ಸಂಪರ್ಕಕ್ಕೆ ಬಂದ ಪ್ರತಿಯೊಬ್ಬ ಪ್ರಾಮಾಣಿಕ ಮತ್ತು ಸಂವೇದನಾತ್ಮಕ ವ್ಯಕ್ತಿಯ ಮೇಲೆಯೂ ಗಾಢ ವಾದ ಆಧ್ಯಾತ್ಮಿಕ ಪ್ರಭಾವದ ಮುದ್ರೆಯನ್ನು ಬೀರಿದೆ.

ಶ್ರೀರಾಮಕೃಷ್ಣರ ಮಹತ್ವವನ್ನು ಅಂತಿಮವಾಗಿ ನಿರ್ಧರಿಸುವ ಮಾನದಂಡ ಯಾವುದು? ಇದನ್ನು 'ಶ್ರೀರಾಮಕೃಷ್ಣ ಲೀಲಾ ಪ್ರಸಂಗ' ಗ್ರಂಥದ ಲೇಖಕರಾದ ಸ್ವಾಮಿ ಶಾರದಾನಂದರು ವಿವರಿಸಿ ಹೇಳುತ್ತಾರೆ. ತನ್ನ ಮಹತ್ವಾಕಾಂಕ್ಷೆಗಳನ್ನು ಮತ್ತು ಲೌಕಿಕ ಬಯಕೆಗಳನ್ನು ಎಷ್ಟರಮಟ್ಟಿಗೆ ಒಬ್ಬ ವ್ಯಕ್ತಿಯು ಭಗವತ್ಸಾಕ್ಷಾತ್ಕಾರಕ್ಕಾಗಿ ತ್ಯಾಗಮಾಡಲು ಸಾಧ್ಯ? ಅಂಥ ಒಬ್ಬ ವ್ಯಕ್ತಿಯ ಘನತೆ ಮತ್ತು ಮಹಾನತೆಗಳ ಆಧಾರದ ಮೇಲೆಯೇ ಈ ಬಗೆಯ ನಿರ್ಧರಣೆಯನ್ನು ಮಾಡಲು ಸಾಧ್ಯ. ಆಧ್ಯಾತ್ಮಿಕ ಕಾತರತೆಯನ್ನು, ನೀರಿನಲ್ಲಿ ಮುಳುಗಿದ ಒಬ್ಬ ಮನುಷ್ಯ ಬೇರೆಲ್ಲವನ್ನೂ ಬಿಟ್ಟು ಕೇವಲ ಉಸಿರಿಗಾಗಿ ತವಕಪಡುವುದಕ್ಕೆ, ಶ್ರೀರಾಮಕೃಷ್ಣರು ಹೋಲಿಸುತ್ತಾರೆ. ಈ ಬಗೆಯ ಉತ್ಕಟ ಆಕಾಂಕ್ಷೆಯು ಅತ್ಯುನ್ನತ ಶಿಖರವನ್ನು ತಲುಪಿದಾಗಲೇ ದಿವ್ಯಧಾಮದಿಂದ ಖಚಿತ ಪ್ರತಿಸ್ಪಂದನವು ಹೊರಹೊಮ್ಮುವುದು. ಅದು ಅಂಥ ವ್ಯಕ್ತಿಯಲ್ಲಿ ದಿವ್ಯಾನಂದದ ಬೆಳಕನ್ನು ಮೂಡಿಸುವುದು, ವರ್ಣನಾತೀತವಾದ ಸಂತೋಷದಿಂದ ಅವನ ವ್ಯಕ್ತಿತ್ವವನ್ನು ತುಂಬಿಬಿಡುವುದು ಮತ್ತು ದಿವ್ಯತೆಯ ಅಸ್ತಿತ್ವದ ವಿಷಯದಲ್ಲಿ ನಿಶ್ಚಯಭಾವವನ್ನು ಸ್ಥಾಪಿಸುವುದು. ಹಾಗೆಯೇ, ಇಂದ್ರಿಯಗಳಿಂದ ಬದ್ಧವೂ, ಪ್ರಾಕೃತಿಕಶಕ್ತಿಗಳ ಕೇಂದ್ರವೂ ಆದ ಪ್ರತ್ಯಗಾತ್ಮವು ಸಾಕ್ಷೀರೂಪದಲ್ಲಿ ಇದ್ದುಕೊಂಡು, ದಿವ್ಯಾತ್ಮಚೈತನ್ಯದ ಅನುಭೂತಿಯನ್ನು ಪಡೆಯುವಂತೆ ಮಾಡುವುದು.

ಅಧಿಕೃತವಾಗಿ ದಾಖಲಾದ, ಭಕ್ತರೊಂದಿಗಿನ ಶ್ರೀರಾಮಕೃಷ್ಣರ ದೈನಂದಿನ ಆಧ್ಯಾತ್ಮಿಕ ಸಂಭಾಷಣೆಯನ್ನು ಅಧ್ಯಯನ ಮಾಡಿದಾಗ ನಮಗೆ ಕಂಡುಬರುವುದಾದರೂ ಏನು? ನಮ್ಮ ಪ್ರಾಪಂಚಿಕ ಅನುಭವವನ್ನು ಬೇರೆಯವರಿಗೆ ಹೇಗೆ ಹೇಳುತ್ತೇವೆಯೋ, ಅಂಥ ಅತ್ಯಂತ ಸರಳ ವಿಧಾನದಲ್ಲಿ ಅವರು ತಮ್ಮ ಭಗವದ್ದರ್ಶನದಿಂದ ಉಂಟಾದ ದಿವ್ಯೋನ್ಮಾದದ ಆಧ್ಯಾತ್ಮಿಕ ಅನುಭವವನ್ನು ಸಾಮಾನ್ಯ ಜನರೂ ಅರ್ಥಮಾಡಿಕೊಳ್ಳುವಂತೆ ಸರಳವಾಗಿ ಮತ್ತು ನೇರವಾಗಿ ವಿವರಿಸಿದರು. ಹೀಗೆ ಕಠಿಣವಾದ ಸಂಸ್ಕೃತ ಭಾಷೆಯ ಗ್ರಂಥಗಳಲ್ಲಿ ಹುದುಗಿಹೋಗಿದ್ದ ತತ್ತ್ವಜ್ಞಾನವನ್ನು ಸಾಮಾನ್ಯ ಜನರೂ ಅರ್ಥಮಾಡಿಕೊಳ್ಳುವಂಥ ಸರಳಭಾಷೆಯಲ್ಲಿ ಅವರು ಎಲ್ಲರಿಗೂ ವಿತರಿಸಿದರು. ಅದಲ್ಲದೆ ಅವರು ದಿವ್ಯತೆಯ ಆಯಾಮದಲ್ಲಿದ್ದ ಅನೇಕ ರಹಸ್ಯಗಳನ್ನು ಮಾನವಪ್ರಜ್ಞೆಯ ಹಂತದ ಮಟ್ಟಕ್ಕೆ ಕೆಳಗೆ ತೆಗೆದುಕೊಂಡು ಬಂದು ವಿವರಿಸುವ ಕೆಲಸವನ್ನು ಮಾಡಿದರು. ಅವುಗಳಲ್ಲಿ ಕೆಲವೆಂದರೆ, ಕುಂಡಲಿನಿ ಮುಂತಾದ ಆಧ್ಯಾತ್ಮಿಕ ಅನುಭವಗಳು, ವಿವಿಧರೀತಿಯ ಭಾವಗಳು, ಭಕ್ತಿಮಾರ್ಗದ ಹಲ ವಾರು ರೂಪಗಳು ಮತ್ತು ರಾಜಯೋಗದ ಅಂತಿಮ ಹಂತವಾದ ನಿರ್ವಿಕಲ್ಪ ಸಮಾಧಿ.

ತಾವು ಪಡೆದುಕೊಂಡ ಭಗವತ್ಸಾಕ್ಷಾತ್ಕಾರವನ್ನು ವಿವರಿಸುತ್ತ ಶ್ರೀರಾಮಕೃಷ್ಣರು ಹೀಗೆ ಹೇಳುತ್ತಾರೆ: "ದೇವಿಯ ದರ್ಶನ ವಾಗಲಿಲ್ಲವಲ್ಲ ಎಂದು ನನ್ನ ಹೃದಯದಲ್ಲಿ ಅಸಹ್ಯವಾದ ವೇದನೆ ಉಂಟಾಗುತ್ತಿತ್ತು. ನೀರನ್ನು ತೆಗೆಯುವುದಕ್ಕೆ ಟವಲನ್ನು ಹಿಂಡುತ್ತಾರಲ್ಲ, ಹಾಗೆ ಯಾರೋ ನನ್ನ ಹೃದಯವನ್ನು ಹಿಂಡಿದಂತಾಗುತ್ತಿತ್ತು. ತಾಯಿಯ ದರ್ಶನ ನನಗೆಂದೂ ಆಗುವುದೇ ಇಲ್ಲ ಎಂದು ಭಾವಿಸಿ ನನ್ನ ಹೃದಯ ತೀವ್ರ ವೇದನೆಯಿಂದ ಚಡಪಡಿಸುತ್ತಿತ್ತು. ಭಗವತಿಯನ್ನು ಕಾಣದೆ ಇನ್ನು ಜೀವಿಸಿದ್ದು ಪ್ರಯೋಜನವಿಲ್ಲ ಎಂದು ಚಿಂತಿಸತೊಡಗಿದೆ. ಗರ್ಭಗುಡಿಯಲ್ಲಿ ಒಂದು ಕತ್ತಿ ಇತ್ತು. ನನ್ನ ದೃಷ್ಟಿ ಕೂಡಲೇ ಅದರ ಮೇಲೆ ಬಿತ್ತು. ಇದರಿಂದಲೇ ಈ ಜೀವನವನ್ನು ಮುಗಿಸಿಬಿಡುತ್ತೇನೆಂದು ಹುಚ್ಚನಂತೆ ಓಡಿ ಅದನ್ನು ತೆಗೆದುಕೊಳ್ಳುವಷ್ಟರಲ್ಲಿ ತಾಯಿಯ ಅದ್ಭುತ ದರ್ಶನವಾಯಿತು. ಪ್ರಜ್ಞಾಶೂನ್ಯನಾಗಿ ಕೆಳಗೆ ಬಿದ್ದೆ. ಅನಂತರ ಹೊರಗಡೆ ಏನು ನಡೆಯುತ್ತಿದೆ, ಅಂದು ಮತ್ತು ಮರುದಿನ ಹೇಗೆ ಕಳೆದುಹೋಯಿತು – ಇದೊಂದೂ ನನಗೆ ತಿಳಿಯಲಿಲ್ಲ. ಆದರೆ ಒಳಗೆ ಹಿಂದೆಂದೂ ಅನುಭವಿಸದ ಅದ್ಭುತ ಆನಂದ ಪ್ರವಾಹ ಹರಿಯುತ್ತಿತ್ತು. ತಾಯಿಯ ದಿವ್ಯಜ್ಯೋತಿಯನ್ನು ನಾನು ಕಂಡೆ."

ಈ ಮೇಲಿನ ದರ್ಶನದ ವಿಷಯವನ್ನು ಇನ್ನೊಂದು ಸಂದರ್ಭ ದಲ್ಲಿ ಈ ರೀತಿ ವಿವರಿಸಿದ್ದಾರೆ: "ಮನೆ, ಬಾಗಿಲು, ಮಂದಿರ ಎಲ್ಲವೂ ಮಾಯವಾದವು. ಎಲ್ಲೂ ಏನೂ ಕಾಣುತ್ತಿಲ್ಲ. ಕೇವಲ ಅಸೀಮ ಅನಂತ ಜ್ಯೋತಿಸ್ಸಮುದ್ರವೊಂದೇ ಕಾಣುತ್ತಿದೆ. ಎಲ್ಲಿ ನೋಡಿದರೂ, ಎಷ್ಟೇ ದೂರ ಕಣ್ಣು ಹಾಯಿಸಿದರೂ ನಾಲ್ಕು ಕಡೆಯೂ ಅದರ ಉಜ್ವಲ ಜ್ವಾಲಮಾಲೆಯು ಭೋರ್ಗರೆಯುತ್ತ ಎಲ್ಲವನ್ನೂ ನುಂಗಿಹಾಕುವಂತೆ ಮುನ್ನುಗ್ಗುತ್ತಿತ್ತು. ನೋಡುತ್ತಿದ್ದಂತೆಯೇ ಅದು ನನ್ನ ಮೇಲೆ ಎರಗಿ ನನ್ನನ್ನು ಎಲ್ಲಿಯೊ ಮುಳುಗಿಸಿಬಿಟ್ಟಿತು. ನಾನು ಏಳುತ್ತ ಮುಳುಗುತ್ತ ಪ್ರಜ್ಞಾಶೂನ್ಯನಾಗಿ ಬಿದ್ದುಬಿಟ್ಟೆ."

ಶ್ರೀರಾಮಕೃಷ್ಣರ ಈ ಮಾತುಗಳು ಅವರು ಪಡೆದುಕೊಂಡ ಆಧ್ಯಾತ್ಮಿಕ ಅನುಭಾವದ ನೈಜ ನಿದರ್ಶನವಾಗಿದೆ. ಈ ಮೂಲಕ ಅವರು **ದೇವರು** ಮತ್ತು **ಆಧ್ಯಾತ್ಮಿಕ ಅನುಭವ** – ಇವೆರಡನ್ನೂ ನಮಗೆ ಅತ್ಯಂತ ಹತ್ತಿರದವನ್ನಾಗಿ ಮಾಡುತ್ತಾರೆ.

(ಮುಂದುವರೆಯುವುದು)

# ಸ್ವಾಮಿ ವಿವೇಕಾನಂದರ ಕರ್ಮಯೋಗ ! ವಿವೇಕಿ ಜನರ ತತ್ತ್ವಭೋಗ !

ಬ್ರಹ್ಮಚಾರಿ ಭೂದೇವಚೈತನ್ಯ

(ಹಿಂದಿನ ಸಂಚಿಕೆಯಿಂದ)

**೬. ಕರ್ಮದಿಂದ ಯೋಗ್ಯತೆ !**
**ಯೋಗ್ಯನಲ್ಲಿ ಧನ್ಯತೆ ॥**

೪೩. ಯೋಗ್ಯನಾಗುವನಕ ಯಾರೂ
ಒಡೆಯನೆನಿಸಲಾರನು ।
ಮೃಗ್ಯ[೨೮] ದ್ರವ್ಯಜಾತ[೨೯] ನೂರು
ಪಡೆದೂ ಸುಖಿಸಲಾರನು ॥

೪೪. ಭೋಗ್ಯ ವಸ್ತು ಗಳಿಪ ತವಕ
ಭಜಿಸಿ[೩೦A] ಲೋಭಿ ನೊಂದನು ।
ಯೋಗ್ಯ ಶಕ್ತಿ ಮೂಡುವನಕ
ಭಜಿಸಲಾರ ಒಂದನೂ ॥

೪೫. ಮೂಢ ಗ್ರಂಥಕೋಟಿಯನ್ನು
ಕೊಂಡುಕೊಳ್ಳಬಲ್ಲನು ।
ಚೂಡ ಹೊಗಲು ಬಿಟ್ಟುದನ್ನು[೩೦B]
ಕಂಡುಕೊಳ್ಳಬಲ್ಲನು! ॥

೪೬. ಭಾಗ್ಯ-ಬಾಗಿಲನ್ನು ತೆರೆವ
ಮರ್ಮ ಕೀಲಿ ಯೋಗ್ಯತೆ ।
ಯೋಗ್ಯಗುಣವ ನಿನ್ನಲೆರೆವ
ಕರ್ಮಕ್ಕಿಲ್ಲಿ ಮಾನ್ಯತೆ ॥

೪೭. ಕರ್ಮವೊಂದು ದಿವ್ಯ ಮೋಡಿ![೩೧] ।
ಯೋಗ್ಯ ಗುಣವ ತರುವುದು ।
ನರ್ಮ[೩೨] ಬಿಟ್ಟು ದುಡಿದು ನೋಡಿ
ಭಾಗ್ಯವರಸಿ ಬರುವುದು ॥

೪೮. ಸಲ್ಲುವಂಥ ಭಾಗ್ಯ ನಡೆಗೆ
ತಡೆಯು ಜಗದೊಳಿಲ್ಲವು ।
ಗೆಲ್ಲುವಂಥ ಯೋಗ್ಯನೆಡೆಗೆ
ನಡೆದು ಬರುವುದೆಲ್ಲವೂ ॥

**೭. ನಿನ್ನ ಕೈಲಿದೆ ನಿನ್ನ ಭಾಗ್ಯ !**

೪೯. ನಿನ್ನ ಕುಂದು ಕೊರತೆಗೆಲ್ಲ
ಮನುಜ ! ನೀನೆ ಹೇತುವು ।
ಸೊನ್ನ[೩೩] ನೀತಿ ! ಮೊರೆಯು[೩೪]ಸಲ್ಲ
ಅನುಜ ! ಕರ್ಮ ಸೇತುವು ॥

೫೦. ಹಿಂದೆ ಎರೆದ ಕರ್ಮಜಲವು
ಇಂದಿನೆಸಳ ತಂದಿದೆ ।
ಮುಂದೆ ಬಿರಿವ ಬಾಳ ಚೆಲುವು
ಇಂದಿನೆಸಕದಂತಿದೆ[೩೫] ॥

೫೧. ನಿನ್ನ ಭಾವಿ ಬಾಳ್ವೆಗೆಲ್ಲ
ಮುಕ್ತ ಶಿಲ್ಪಿ ನೀನಲ್ಲೆ ।
ಖಿನ್ನನಾಗಿ ಲಾಭವಿಲ್ಲ
ಯುಕ್ತ[೩೬] ಶ್ರಮವ ನೀಡೆಲ್ಲೆ॥

೫೨. ಇಷ್ಟಫಲಪ್ರಾಪ್ತಿ ಗಾಥೆ
ಕೃತಿಯ ರೀತಿಯಂತಿದೆ ।
ಶಿಷ್ಟ ಮಂತ್ರಮಾತೆ ಗೀತೆ
'ಕೃತಿ ಕೌಶಲ' ಎಂದಿದೆ ॥

೫೩. ಸಕ್ತಿಯಿಂದ[೩೭] ಶಕ್ತಿ ಪೋಲು !
ಕಡಿದು ಸಂಗ ದುಡಿಯೆಲ್ಲೆ ।
ಯುಕ್ತಿಯಿಂದ ತ್ಯಜಿಸೆ ಮೇಲು ।
ಹಿಡಿದು ಮನವನಾಳೆಲ್ಲೆ ॥

**೮. ಸ್ವಾರ್ಥಶೂನ್ಯ ಕರ್ಮ !**
**ಜ್ಞಾನ ಪ್ರಾಪ್ತಿಯ ಮರ್ಮ ॥**

೫೪. ಕರ್ಮವೆಂದರಲ್ಲಿ ಊಹ್ಯ
ಮನೋರಥವು[೩೮] ಹಿಂದಿದೆ ।
ಧರ್ಮ, ಕೀರ್ತಿ, ನಾಕ, ದ್ರವ್ಯ
ಮನೋಗತವು[೩೯] ಮುಂದಿದೆ ॥

೫೫. ಎಲ್ಲ ಆಸೆ ಪೂರ್ತಿಗಾಗಿ
ಲೋಕದಲ್ಲಿ ದುಡಿವರು ।
ಸಲ್ಲ ಆಸೆ ಎಂಬುದಾಗಿ
ಶೋಕದಲ್ಲೂ ನುಡಿಯರು! ।

೫೬. ಕೋಟಿಗೊಬ್ಬ ಧೀರ ಗೈವ
ಕೆಲಸಕಾಗಿ ಕೆಲಸವ ।
ದಾಟಿ ಸಂಗಸಗರಜಲವ[೪೦]
ಕಲಸಪ್ರಾಯನೆನಿಸುವ ॥

೫೭. ಆಸೆ ಬಿಟ್ಟರಿನ್ನು ಕರ್ಮ
ಫಲಿಸದೆಂದು ಅಳುವರು।
ಮೀಸೆ ಬಿಟ್ಟರೇನು, ಮರ್ಮ
ಕಲಿಯದಾಗಿ ಅಳಿವರು ॥

೫೮. ಸ್ವಲ್ಪ ತಾಳ್ಮೆ ! ಸ್ವಲ್ಪ ತ್ಯಾಗ ।
ಪ್ರೇಷ್ಠ[೪೧] ಬಿಟ್ಟು ದುಡಿವುದು ।
ಅಲ್ಪವೇಕೆ, ಬಹಳ ಬೇಗ
ಶ್ರೇಷ್ಠಫಲವೇ ದೊರೆವುದು ॥

೫೯. ಸ್ವಾರ್ಥಕಾಗಿ ಗೈದುದೆಲ್ಲ
ನರನ ಬಿಗಿವ ಬಂಧನ ।
ಸ್ವಾರ್ಥ ಬಿಟ್ಟು ಸಂದುದೆಲ್ಲ
ಪರಮ ಪದಕೆ ಸಾಧನ ॥

೬೦. ಸ್ವಾರ್ಥ ರೊಚ್ಚು ರೋಗದಂತೆ
ಕಾಡಿ ಸ್ವಾಸ್ಥ್ಯ ಕಳೆವುದು ।
ಸ್ವಾರ್ಥರಾಡಿ ಬಾಡಿದಂತೆ
ನಾಡಿ ಸ್ವಸ್ಥಗೊಳುವುದು ॥

೬೧. ಪ್ರೀತಿ, ಸತ್ಯ, ಸೇವೆಯೆಲ್ಲ
ಚರಮ ಗುರಿಯ ಮಂತ್ರವು ।
ನೀತಿ ಟೊಳ್ಳು ಶಾಸ್ತ್ರವಲ್ಲ
ಪರಮ ಶಕ್ತಿ-ತಂತ್ರವು ॥

೬೨. ಭಾವಿ ಲೆಕ್ಕ, ನರಕ-ನಾಕ-
ಚಿಂತೆ ಕೊಡವಿ ಚೆಲ್ಲುತ ।
ಸಾವಿಗಂತು ಸೊಪ್ಪುಹಾಕ-
-ದಂತೆ ಸಂಗ ಕೊಲ್ಲುತ ॥

೬೩. ಮಾತ್ರವೈದು ನಿಮಿಷ ಕೂಡ
ಸ್ವಾರ್ಥ ಮೀರಿ ದುಡಿವವ ।
ಪಾತ್ರ ಚಂಡ ಬಲಕೆ ನೋಡ ।
ಧರ್ಮವೀರನೆನಿಸುವ ॥

೬೪. ಫಲಕೆ ಗಂಟುಬಿದ್ದ ಸತ್ತ್ವ
ವ್ಯರ್ಥ ಹರಿವ ನೀರೊಲು ।
ಬಲಕೆ ತ್ಯಾಗ ಮೂಲ ತತ್ತ್ವ !
ಸ್ವಾರ್ಥ ಸೆರೆಯ ಬಾಗಿಲು ॥

೬೫. ವ್ಯರ್ಥ ಕರ್ಮಫಲಾಸಕ್ತಿ
ಭುಕ್ತಿ ಬಯಕೆ ಬಿಲದೊಲು ।
ಸ್ವಾರ್ಥದೋಷ[೪೨] ತಡೆವ ವ್ಯಕ್ತಿ
ಶಕ್ತಿ ಜಲದ ಮಡುವೊಲು ॥

೬೬. ಈ ಹತೋಟಿಯಿಂದ ಎದ್ದ
ಶೀಲಶಕ್ತಿ ಬೆಳೆವುದು ।
ಈಹಶೂನ್ಯ[೪೩] ಕ್ರಿಸ್ತ ಬುದ್ಧ-
-ರಂಥ ಬಲವ ತಳೆವುದು ॥

೬೭. ಗುಟ್ಟು ಇದನ್ನರಿಯದಂಥ
ಹೆಡ್ಡ ಮನುಜರೆಲ್ಲರೂ ।
ತೊಟ್ಟು ಭ್ರಮೆಯನಾಳುವಂಥ
ಗೊಡ್ಡು[೪೪] ತವಕವಂತರು ॥

೬೮. ಪೆದ್ದ ಕೂಡ ಜನರನಿಲ್ಲಿ
ಆಳಬಲ್ಲ ನಿಜದಲಿ ।
ಜಿದ್ದು ದೂಡಿ ಫಲಿತದಲ್ಲಿ
ತೋಳಬಲದಿ ದುಡಿಯಲಿ ॥

೬೯. ಗೆದ್ದು ಚಪಲ, ಧೀರನಾಗಿ
ಆಳ್ವ ತವಕ ತೊರೆಯಲಿ ।
ಎದ್ದು ರಾಜರಾಜನಾಗಿ
ಬಾಳ್ವನಾಗ ಧರೆಯಲಿ ॥

೭೦. ಹೀನ ಲಾಭ ಲೆಕ್ಕವನ್ನು
ತೊರೆದು ನೆರವ ನೀಡೆಲ್ಲೆ ।
ದೀನ ನಿನ್ನ ಗುಣಗಳನ್ನು
ಒರೆಯಲೆನ್ನಬೇಡವ್ವೆ ।

೭೧. ಇಂತು ಸ್ವಾರ್ಥ ಚಿಂತೆ ಬಿಟ್ಟು
ದಾನ ಧರ್ಮ ಮಾಡು ನೀ ।
ಎಂತು ದೇವ ಕೃಪೆಯನಿಟ್ಟು
ಸ್ಥಾನ ಕೊಡುವ ನೋಡು ನೀ ।

೭೨. ಒಳ್ಳೆ ಕಾರ್ಯ ಮಾಡುವಂದು
ನೀಗು ಫಲದ ಕಾತರ ।
ಗುಳ್ಳೆತನವ ಬಿಟ್ಟು ಬಂದು
ಆಗು ಮಹಾಸಾಗರ ॥

**೯. ಕರ್ಮಯೋಗದ ಉತ್ತುಂಗ ಶಿಖರ**

೭೩. ನಿಲ್ಲದಂತೆ ದುಡಿಯೆ ಕೊನೆಗೆ
ಶಾಂತಿ ಪಡೆವುದೆಲ್ಲಿದೆ ?
ಸಲ್ಲದಿಂಥ ಪ್ರಶ್ನೆ ನಿನಗೆ
ಭ್ರಾಂತಿ ನಿನ್ನ ಮುಸುಕಿದೆ ॥

೭೪. ಬಾಳಲೆರಡು ಬಗೆಯ ಗತ್ತು
ಭೋಗ, ಯೋಗ ಕಣಗಳು[೪೫]।
ಕಾಳಗಕ್ಕೆ ಕರ್ಮ ! ಮತ್ತು
ತ್ಯಾಗ, ಶಾಂತ-ವನಗಳು !

( ಪುಟ ೩೬ಕ್ಕೆ ಮುಂದುವರೆದಿದೆ )




# ಸಾಮಾನ್ಯತೆಯ ಶ್ರೀಮೂರ್ತಿ ಶ್ರೀರಾಮಕೃಷ್ಣ

ಡಾ. ಎಚ್.ಎನ್.ಮುರಳೀಧರ

**ಶ್ರೀರಾಮಕೃಷ್ಣ ಅವತಾರದ ಒಂದು ಪ್ರಮುಖ ವೈಶಿಷ್ಟ್ಯವೆಂದರೆ ಸರಳತೆ. ಶ್ರೀರಾಮಕೃಷ್ಣರು ಯಾವ ಆಡಂಬರದ ಸೋಗೂ ಇಲ್ಲದೆ ಸಾಮಾನ್ಯರಂತೆ ಬಾಳಿದವರು. ಈ ಸಾಮಾನ್ಯತೆಯ ಪ್ರಬುದ್ಧ ಜಿಜ್ಞಾಸೆ ಮತ್ತು ಶ್ರೀರಾಮಕೃಷ್ಣರು ಅದನ್ನು ತಮ್ಮ ಜೀವನದಲ್ಲಿ ಪ್ರಕಟಿಸಿದ ಚೇತೋಹಾರಿ ವರ್ಣನೆ ಈ ಲೇಖನದ ವಸ್ತುವಿಷಯ. ಲೇಖಕರು ಪ್ರಸಿದ್ಧ ವಾಗ್ಮಿಗಳು ಮತ್ತು ಬರಹಗಾರರು. ಪ್ರಸ್ತುತ ಬೆಂಗಳೂರಿನ ಎ.ಪಿ.ಎಸ್. ವಾಣಿಜ್ಯ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.**

ಶ್ರೀರಾಮಕೃಷ್ಣರ ಜೀವನ–ಸಂದೇಶಗಳು ನಮ್ಮ ಮುಂದೆ ತೆರೆದಿಡುವ ಆಯಾಮಗಳು ಹಲವು. ಒಂದು ಕಡೆಯಿಂದ ಅವು ಕಾಲದೇಶಗಳಿಗೆ ಬದ್ಧವೆನಿಸಿದರೆ ಇನ್ನೊಂದು ಕಡೆಯಿಂದ ಅವು ಅವುಗಳಿಂದ ಮುಕ್ತವೂ ಹೌದು. ಒಂದು ದೃಷ್ಟಿಯಿಂದ ಆಕಾಶದ ಎತ್ತರದಲ್ಲಿ ವಿಹರಿಸುತ್ತಿದ್ದರೂ ಇನ್ನೊಂದು ದೃಷ್ಟಿಯಿಂದ ಈ ನೆಲದ ಆಳದಲ್ಲೇ ಬೇರುಬಿಟ್ಟಿರುವುದೂ ಉಂಟು. ಮೇಲ್ನೋಟಕ್ಕೆ ಈ ಎರಡೂ ಆಯಾಮಗಳನ್ನು ಲೌಕಿಕ ಹಾಗೂ ಅಲೌಕಿಕ ಆಯಾಮಗಳೆಂದು ವಿಶ್ಲೇಷಣೆಯ ದೃಷ್ಟಿಯಿಂದ ಗುರುತಿಸಿಕೊಳ್ಳಬಹುದು. ಶ್ರೀರಾಮಕೃಷ್ಣರಂಥವರ ಬದುಕನ್ನು ಗ್ರಹಿಕೆಯ ಅನುಕೂಲಕ್ಕಾಗಿ ಒಂದು ವ್ಯಾಕರಣ ಸೂತ್ರಕ್ಕೆ ಹೋಲಿಸಬಹುದು. ಪ್ರತಿಯೊಂದು ವ್ಯಾಕರಣ ಸೂತ್ರಕ್ಕೂ ತನ್ನದೇ ಆದ ನಿರ್ದಿಷ್ಟ ಸೂಚನೆ ಇರುತ್ತದೆ. ಈ ಅರ್ಥದಲ್ಲಿ ಅದೊಂದು ಮಂಡನೆಯ ಕ್ರಮ. ಆದರೆ ಅದನ್ನೊಂದು ಸಂದರ್ಭದ ಉತ್ಪನ್ನವೆಂದು ಪರಿಶೀಲಿಸಿದಾಗ ಅದೊಂದು ಪರಿಷ್ಕಾರವೂ ಆಗಿರುತ್ತದೆ. ತನಗಿಂತ ಹಿಂದಿನದನ್ನು, ತನ್ನ ಸಮಕಾಲೀನವಾದುದನ್ನು ತಿದ್ದುವ, ಸರಿಪಡಿಸುವ ಕೆಲಸವನ್ನು ಅದು ಮಾಡುತ್ತಿರುತ್ತದೆ. ಅದೊಂದು ಪ್ರತಿಕ್ರಿಯೆ ಎನ್ನುವುದೂ ನಿಜ. ಈ ದೃಷ್ಟಿಯಿಂದ ಶ್ರೀರಾಮಕೃಷ್ಣರ ಜೀವನವು ಇತಿಹಾಸದ ಸಂದರ್ಭದಲ್ಲಿ ನಮಗೊಂದು ಪಾಠವೂ ಹೌದು. ಇದರ ಸ್ಥೂಲ ವಿಶ್ಲೇಷಣೆ ಈ ಬರಹದ ವಸ್ತು.

ನಮ್ಮಲ್ಲಿ ಧಾರ್ಮಿಕ–ಪ್ರಾಪಂಚಿಕ, ಆಧ್ಯಾತ್ಮಿಕ–ಲೌಕಿಕ ಎಂಬೀ ಬಗೆಯ ವಿಂಗಡಣೆಗಳು ಲೋಕರೂಢಿಯಲ್ಲಿ ಬೇರುಬಿಟ್ಟಿವೆ. ಆಧ್ಯಾತ್ಮಿಕವಾದ ತಪಸ್ಸು–ಸಾಧನೆ–ಸಿದ್ಧಿಗಳನ್ನು ಅಸಾಮಾನ್ಯವೆಂದು ಕರೆದೇ ನಮಗೆ ಅಭ್ಯಾಸ. ಹಾಗಲ್ಲದವು ನಮಗೆ ಸಾಮಾನ್ಯತೆಯ ಗಡಿರೇಖೆಯೊಳಕ್ಕೆ ಬರುತ್ತವೆ. ಈ 'ಅಸಾಮಾನ್ಯತೆ' ಬೇರೊಂದು ರೀತಿಯಲ್ಲಿ ನಮಗೆ 'ಅನುಕೂಲ'ವಾಗುವುದೂ ಉಂಟು. 'ಅಸಾಮಾನ್ಯ'ರನ್ನು ಬೇರೊಂದು ಪರಿಧಿಗೆ ಸೇರಿಸಿಬಿಟ್ಟು, ಸಾಮಾನ್ಯರಾದ ನಮ್ಮಿಂದ ಏನು ತಾನೆ ಸಾಧ್ಯ ಎಂಬ ಬೇರೊಂದು ಬಗೆಯ ನೆಮ್ಮದಿಯ ನಿಷ್ಕ್ರಿಯತೆಗೂ ನಾವು ಶರಣಾಗುವುದುಂಟು. ಜೊತೆಗೆ ಈ ಅಸಾಮಾನ್ಯತೆಗೆ ಬೇರೊಂದು ಬಗೆಯ ವ್ಯಾವಹಾರಿಕವಾದ ಮುಖವೂ ಇದೆ. ತಮ್ಮನ್ನು ಇತರರು ಧಾರ್ಮಿಕ ಅಥವಾ ಆಧ್ಯಾತ್ಮಿಕ ವ್ಯಕ್ತಿಗಳೆಂದು ಗುರುತಿಸಬೇಕೆಂದು ಆಶಿಸುವವರು ತಮ್ಮದು ಒಂದು ಬಗೆಯ ಅಸಾಮಾನ್ಯತೆಯ ವ್ಯಕ್ತಿತ್ವ ಎಂದೇ ಬಿಂಬಿಸಿಕೊಳ್ಳುವುದುಂಟು. ಹೀಗಾಗಿ ಇವರ ನಡೆನುಡಿಗಳು, ವೇಷಭೂಷಣಗಳು, ಆಚಾರವಿಚಾರಗಳು ಇತರರಿಗಿಂತ ಅತಿ ಭಿನ್ನವಾಗಿ ಪ್ರತಿಷ್ಠಾಪಿತಗೊಳ್ಳುತ್ತವೆ. ಒಟ್ಟಿನಲ್ಲಿ ಅಸಾಮಾನ್ಯತೆಯನ್ನು

ವಿಶ್ಲೇಷಿಸುವುದೆಂದರೆ ಅದು ಅಷ್ಟು ಸುಲಭದ ಮಾತಲ್ಲ ಎಂಬ ನೆಲೆಗೆ ನಾವು ಬಂದು ತಲುಪುವಂತಾಗುತ್ತದೆ. ಈ ಹಿನ್ನೆಲೆಯಲ್ಲಿ ಶ್ರೀರಾಮಕೃಷ್ಣರ ಸಾಮಾನ್ಯತೆ – ಅಸಾಮಾನ್ಯತೆಗಳು ನಮಗೆ ಏನನ್ನು ತಿಳಿಸಬಲ್ಲವು ಎಂಬುದರ ಕಡೆಗೆ ಒಂದಿಷ್ಟು ದೃಷ್ಟಿಯನ್ನು ಹರಿಯಿಸಬಹುದು.

ಶ್ರೀರಾಮಕೃಷ್ಣರ ಜೀವನ ಎಷ್ಟು ಅಸಾಮಾನ್ಯವಾದುದು ಎಂಬುದನ್ನು ಇಂದು ಇತಿಹಾಸವೇ ನಮ್ಮ ಕಣ್ಣೆದುರಿಗೆ ಹಿಡಿದಿದೆ. "ಮೂವತ್ತು ಕೋಟಿ ಭಾರತೀಯರ ಎರಡು ಸಾವಿರ ವರ್ಷಗಳ ಆಧ್ಯಾತ್ಮಿಕ ಜೀವನದ ಪರಾಕಾಷ್ಠೆ ಶ್ರೀರಾಮಕೃಷ್ಣರು" ಎಂಬ ರೋಮಾರೋಲಾ ಅವರ ಮಾತಿಗಿಂತ ಹೆಚ್ಚಿನದೇನನ್ನೂ ನಾವು ಹೇಳಬೇಕಾಗಿಲ್ಲ. ಆದರೆ ಇಂತಹ ಶ್ರೀರಾಮಕೃಷ್ಣರು ಮೊದಲಿನಿಂದಲೂ ತಮ್ಮನ್ನು ಗುರುತಿಸಿಕೊಂಡಿದ್ದು ಸಾಮಾನ್ಯತೆಯ ಕಡೆಗೇ. ಅವರ ಪ್ರಕಾರ ಸಾಮಾನ್ಯತೆಯೆಂದರೆ ಸರಳತೆ ಮತ್ತು ಸರಳತೆ ಎಂದರೆ ಸಹಜತೆ. ಅಸಹಜವಾದ ಯಾವುದನ್ನೂ ಅವರ ಮನೋಧರ್ಮ ಸ್ವೀಕರಿಸುತ್ತಿರಲಿಲ್ಲ.

**ಸಹಜಮಾನಸನಾಗದಿರೆ ನೀ**
**ಸಹಜಸುಂದರ ದೇವನೊಲುಮೆಯ**
**ಗಳಿಪುದೆಂತೀ ಲೋಕದಿ?**

ಎಂಬ ಹಾಡೊಂದನ್ನು 'ವಚನವೇದ' ದಲ್ಲಿ ಕಾಣುತ್ತೇವೆ. ಸಾಮಾನ್ಯತೆಯೆಡೆಗಿನ ಅವರ ಒಲವನ್ನು ಬಾಲ್ಯದಿಂದಲೂ ಕಾಣುತ್ತೇವೆ. ಸರಳಸಾಮಾನ್ಯರೊಂದಿಗೆ ಒಡನಾಡುವುದೆಂದರೆ ಬಾಲಕ ಗದಾಧರನಿಗೆ ಅತ್ಯಂತ ಪ್ರಿಯ. ಪುರೋಹಿತರ ಅಸಾಮಾನ್ಯ ಶಾಸ್ತ್ರ ಪಾಂಡಿತ್ಯ ಆತನಿಗೆ 'ಅಕ್ಕಿ ಬಾಳೆಹಣ್ಣು ಗಂಟುಕಟ್ಟುವ' ಅಸಹಜ ಪ್ರವೃತ್ತಿಯಾಗಿ ಕಂಡುಬರುತ್ತದೆ. ಆತ ಕಮ್ಮಾರರ ಜಾತಿಯವಳಾದ ಧನಿಯಿಂದ ಮೊದಲ ಭಿಕ್ಷೆ ಸ್ವೀಕರಿಸಿದ ಸನ್ನಿವೇಶ ಕೂಡ ಈ ಮನೋಧರ್ಮದ ಒಂದು ರೂಪಕವಾಗಿ ನಿಲ್ಲುತ್ತದೆ.

ಶ್ರೀರಾಮಕೃಷ್ಣರ ಜೀವನದಲ್ಲಿ ಉದ್ದಕ್ಕೂ ಕಾಣುವ ಒಂದು ವೈಶಿಷ್ಟ್ಯವೆಂದರೆ ಸಹಜ ಮಾನುಷತೆಯನ್ನು ಅವರು ಅಭಿವ್ಯಕ್ತಿಗೊಳಿಸಿದ ರೀತಿ. ನಡೆನುಡಿಗಳಲ್ಲಾಗಲಿ, ಆಚಾರ ವಿಚಾರಗಳಲ್ಲಾಗಲಿ ಎಂತಹ ಸಾಮಾನ್ಯ-ಅತಿಸಾಮಾನ್ಯರಿಗೂ ಅವರು ಹೊರಗಿನವರಾಗಿ, ವಿಚಿತ್ರವರ್ತನೆಯವರಾಗಿ ಕಂಡುಬಂದಿರಲಿಲ್ಲ. ಇಷ್ವರಮೇಲೆ ಅವರದು ನಿರಂತರವಾಗಿ ಸಮಾಧಿಯ ಭೂಮಿಕೆಯಲ್ಲಿ ವಿಹರಿಸುತ್ತಿದ್ದ ಚೇತನ! ಇನ್ನೊಂದು ರೀತಿಯಲ್ಲಿ ಹೇಳಬಹುದಾದರೆ, ಬಹುಶಃ ದೇವರು ಮಾತ್ರ ಇಷ್ಟು ಸಹಜ ಸರಳ ಮಾನವನಾಗಿ ಬದುಕಬಲ್ಲನೇನೋ ಎಂಬಂತೆ ಅವರು ಎಲ್ಲರೊಂದಿಗೆ ವ್ಯವಹರಿಸಿದರು. ಸಾಮಾಜಿಕವಾಗಿ, ಧಾರ್ಮಿಕವಾಗಿ ಉನ್ನತ ಸ್ತರಗಳಲ್ಲಿದ್ದು ಅಸಾಮಾನ್ಯರೆನಿಸಿಕೊಂಡವರೊಂದಿಗೆ ಒಡನಾಡುವಾಗಲೆಲ್ಲ ಅವರಲ್ಲಿ ಒಂದು ಬಗೆಯ ಶಿಶುಸಹಜ ಆಂತರಿಕ ಮನೋಧರ್ಮವನ್ನು ಗುರುತಿಸಬಹುದು. ಈ ಮೂಲಕವೂ ನಾವು ಪಡೆಯುವ ಸಂದೇಶ ಸ್ಪಷ್ಟವಾಗಿಯೇ ಇದೆ. ಶ್ರೀರಾಮಕೃಷ್ಣರಲ್ಲಿ ದೇವಭಾವ ಮತ್ತು ಮಾನುಷಭಾವಗಳ ಅಪೂರ್ವ ಸಂಗಮದ ಬಗ್ಗೆ ಸ್ವಾಮಿ ಶಾರದಾನಂದರು ತಮ್ಮ 'ಶ್ರೀರಾಮಕೃಷ್ಣ ಲೀಲಾಪ್ರಸಂಗ'ದಲ್ಲಿ ಹೀಗೆ ಬರೆಯುತ್ತಾರೆ:

"ಶ್ರೀರಾಮಕೃಷ್ಣರ ಜೀವನವನ್ನು ಅಧ್ಯಯನ ಮಾಡಿದಷ್ಟೂ ಅವರಲ್ಲಿ ನಮಗೆ ಕಂಡುಬರುವ ಒಂದು ಮೋಹಕ ಲಕ್ಷಣವೆಂದರೆ ದೇವ-ಮಾನವ ಭಾವಗಳೆರಡರ ಅಪೂರ್ವ ಸಂಗಮ. ಇವೆರಡರ ಮಧುರ ಸಾಮಂಜಸ್ಯ ಒಂದೇ ನೆಲೆಯಲ್ಲಿ ಸಾಧ್ಯ ಎಂಬುದು ಅವರನ್ನು ನೋಡದಿದ್ದರೆ ನಮಗೆ ತಿಳಿಯುತ್ತಿರಲಿಲ್ಲ. ಪೂರ್ಣ ದೇವತ್ವ ಮತ್ತು ದಿವ್ಯಶಕ್ತಿ – ಇವು ಮಾನವೀಯ ಆವರಣದ ಮೂಲಕ ಪ್ರಕಾಶಿತವಾದರೆ ಏನಾಗುವುದೋ ಅದೇ ಶ್ರೀರಾಮಕೃಷ್ಣರು. ಇವೆರಡರಲ್ಲಿ ಯಾವುದೂ ಅವರಲ್ಲಿ ಕೇವಲ ತೋರಿಕೆಯದಾಗಿರಲಿಲ್ಲ. ಅವರು ಮಾನವಕಲ್ಯಾಣಕ್ಕಾಗಿಯೇ ಮಾನವಭಾವವನ್ನು ಯಥಾರ್ಥವಾಗಿಯೇ ಸ್ವೀಕರಿಸಿದ್ದರು. ಇದರ ಮೂಲಕ ದೇವತ್ವಕ್ಕೆ ಏರುವುದು ಹೇಗೆಂಬುದನ್ನು ತೋರಿಸಿದರು." (*ಶ್ರೀರಾಮಕೃಷ್ಣ ಲೀಲಾಪ್ರಸಂಗ*, ಭಾಗ ೧, ಪುಟ ೯೫.)

ಶ್ರೀರಾಮಕೃಷ್ಣರ ಮಾನುಷ ಅಭಿವ್ಯಕ್ತಿಯೊಂದೇ ನಮಗೆ ಹಲವು ನೆಲೆಗಳಲ್ಲಿ ವಿಶ್ಲೇಷಣೆಗೆ ವಸ್ತುವನ್ನು ಒದಗಿಸುತ್ತದೆ. ಇಂಗ್ಲಿಷ್ ವಿದ್ಯಾಭ್ಯಾಸದ ಪರಿಣಾಮವಾಗಿ ಸಾಮಾನ್ಯರೆಲ್ಲರೂ – ಕೃತಕವಾಗಿಯಾದರೂ ಸರಿ – ಅಸಾಮಾನ್ಯರಾಗಲು ಹಾತೊರೆಯುತ್ತಿದ್ದ ಸನ್ನಿವೇಶ ಅದು. ಇಂತಹ ಸಂದರ್ಭದಲ್ಲಿ ಶ್ರೀರಾಮಕೃಷ್ಣರು ಕಲ್ಕತ್ತದ ನಿವಾಸಿಗಳಾಗಿದ್ದರೂ ತಮ್ಮ ಗ್ರಾಮ್ಯತೆಯನ್ನು ಬಿಟ್ಟುಕೊಡಲಿಲ್ಲ. ಅಷ್ಟೇ ಅಲ್ಲ, ಮಾತುಕತೆಗಳಲ್ಲಿ, ವೇಷಭೂಷಣಗಳಲ್ಲಿ ಇಂಗ್ಲಿಷರನ್ನು ಅನುಕರಿಸುತ್ತಿದ್ದ 'ಬಾಬು'ಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದರು. ಅಲ್ಲದೆ ಇದರ ಮುಂದುವರಿಕೆಯಾಗಿ ಇನ್ನೊಂದು ಸಂಗತಿಯನ್ನು ಕೂಡ ಪರಿಶೀಲನೆಗೆ ತೆಗೆದುಕೊಳ್ಳಬಹುದು. ತಮ್ಮ ಸಮಕಾಲೀನ ಸಂದರ್ಭದಲ್ಲಿ ಸ್ಥಾಪಿತವಾಗಿದ್ದ ಬಹು ದೊಡ್ಡ ಜ್ಞಾನಪ್ರಪಂಚವನ್ನು ಶ್ರೀರಾಮಕೃಷ್ಣರು ಎದುರಾದದ್ದು ಕೂಡ ತಮ್ಮ ಸಾಮಾನ್ಯತೆಯ ಮೂಲಕವೇ. ಕೇಶವಚಂದ್ರ ಸೇನ, ಈಶ್ವರಚಂದ್ರ ವಿದ್ಯಾಸಾಗರ, ಬಂಕಿಮಚಂದ್ರ, ಪ್ರತಾಪಚಂದ್ರ ಮಜುಂದಾರ ಮೊದಲಾದವರು ತಮ್ಮ ಜ್ಞಾನಕ್ಕಾಗಿಯೇ, ಸಂಘಟನಾ ಕೌಶಲಕ್ಕಾಗಿಯೇ ಅಂದಿನ ಸಮಾಜದಲ್ಲಿ ಬಹುದೊಡ್ಡ ಹೆಸರು ಮಾಡಿದ್ದವರು. ಅವರಿಗೆ ಹೋಲಿಸಿದರೆ 'ವ್ಯಾವಹಾರಿಕ' ನೆಲೆಯಲ್ಲಿ ಕೂಡ ಶ್ರೀರಾಮಕೃಷ್ಣರು ಅತ್ಯಂತ ಸಾಮಾನ್ಯರು. ಆದರೆ ಅವರೆಲ್ಲರನ್ನೂ ತಿದ್ದಿದವರು, ಪರಿಷ್ಕರಿಸಿದವರು ಶ್ರೀರಾಮಕೃಷ್ಣರು ಎಂಬುದನ್ನು ಇತಿಹಾಸ ದಾಖಲಿಸಿದೆ. ಆ ಮೂಲಕ ಶ್ರೀರಾಮಕೃಷ್ಣರು ಸಾಮಾನ್ಯತೆಯನ್ನು ಒಂದು ಯುಗಧರ್ಮವೆಂಬಂತೆ ನಮ್ಮ ಮುಂದಿರಿಸಿಹೋಗಿದ್ದಾರೆ. ಇಂಗ್ಲಿಷ್-ಸಂಸ್ಕೃತಗಳನ್ನರಿಯದ ಗ್ರಾಮೀಣ ಬಂಗಾಳಿಯೊಬ್ಬನು ಅವತಾರವರಿಷ್ಠನಾಗಿ ಪ್ರತಿಷ್ಠಾಪಿತವಾದುದನ್ನು ಈ ಕಾಲದ ಒಂದು ದೊಡ್ಡ ರೂಪಕವಾಗಿ ಸ್ವೀಕರಿಸಬಹುದು. ಇದನ್ನು ಇನ್ನೊಂದು ನೆಲೆಯಿಂದಲೂ ಪರಿಶೀಲಿಸಲು ಸಾಧ್ಯವಿದೆ. ಒಂದು ದೃಷ್ಟಿಯಿಂದ ಮಹೇಂದ್ರನಾಥ – ನರೇಂದ್ರನಾಥ ಇಬ್ಬರೂ ಆ ಕಾಲದ ಜ್ಞಾನಪ್ರಪಂಚದ ಎರಡು ವಿಭಿನ್ನ ಮಾದರಿಗಳೆನ್ನಬಹುದು. ಈ ಎರಡು ಮಾದರಿಗಳಿಗೂ ವೈಸಾದೃಶ್ಯವನ್ನು ಒದಗಿಸಿದ್ದು ಶ್ರೀರಾಮಕೃಷ್ಣರ ಸಾಮಾನ್ಯತೆ.

ಮಹೇಂದ್ರನಾಥನು ಶ್ರೀರಾಮಕೃಷ್ಣರನ್ನು ಎದುರಿಸಿದ್ದೇ ತರ್ಕದ ನೆಲೆಯಿಂದ. ಜ್ಞಾನದಲ್ಲಿ ಒಂದು ಸಂಗತಿ ಸತ್ಯವಾದರೆ ಅದರ ವಿರುದ್ಧವಾದುದು ಅಸತ್ಯವಾಗಿರಬೇಕು ಎನ್ನುವುದು ಆತನ –

ಹಾಗೂ ಆತನಂತಹ ಎಲ್ಲ ಆಧುನಿಕ ತಿಳಿವಳಿಕೆಯುಳ್ಳವರ – ಜ್ಞಾನಸೌಧದ ಮೂಲಾಧಾರ. ಅಸಾಮಾನ್ಯರು ಸಾಮಾನ್ಯರಾದವರಿಗೆ ತಿಳಿವಳಿಕೆಯನ್ನು ನೀಡುವ ಜವಾಬ್ದಾರಿಯನ್ನು ಹೊರಬೇಕು ಎನ್ನುವುದು ಕೂಡ ಆತನ ಗ್ರಹಿಕೆಯಾಗಿತ್ತು. ಅವನೇ ಹೇಳಿಕೊಳ್ಳುವಂತೆ ಅವನ ಈ ಎರಡೂ ಗ್ರಹಿಕೆಗಳನ್ನು ಶ್ರೀರಾಮಕೃಷ್ಣರು ಒಂದೇ ಸಲಕ್ಕೆ ನುಚ್ಚುನೂರು ಮಾಡಿದರು. ಇನ್ನು ನರೇಂದ್ರನಾಥನ ವಿಷಯಕ್ಕೆ ಬರುವುದಾದರೆ ಆತನದು ದಣಿವರಿಯದ ಅನ್ವೇಷಣೆಯ ಪ್ರವೃತ್ತಿ. ಇದು ತನ್ನ ನಿಲುಗಡೆಯನ್ನು ಕಂಡುಕೊಂಡದ್ದು ಆಧುನಿಕ ವಿಶ್ವವಿದ್ಯಾಲಯಗಳ ಸಂಶೋಧನ ಕೇಂದ್ರಗಳಲ್ಲೋ ಪ್ರಯೋಗಶಾಲೆಗಳಲ್ಲೋ ಅಲ್ಲ. ಬದಲಾಗಿ ಬಾಲ್ಯದಲ್ಲೇ ಶಾಲೆ ಯಿಂದ ಹೊರಬಿದ್ದ ದಕ್ಷಿಣೇಶ್ವರದ ಸಾಮಾನ್ಯ ಅರ್ಚಕನ ಸಣ್ಣ ಕೊಠಡಿಯೊಂದರಲ್ಲಿ. ಜ್ಞಾನವನ್ನು ಸಾಂಸ್ಥಿಕ ಪಟ್ಟಣಗಳಲ್ಲಿ ಪ್ರತಿಷ್ಠಾ ಪಿಸುವುದರ ನಿರಾಕರಣೆಯನ್ನು ಶ್ರೀರಾಮಕೃಷ್ಣರ ಜೀವನದಲ್ಲಿ ಸ್ಪಷ್ಟವಾಗಿ ಕಾಣಬಹುದು.

ಜನಸಾಮಾನ್ಯರನ್ನು ಕಡೆಗಣಿಸಿದ್ದು ನಮ್ಮ ರಾಷ್ಟ್ರೀಯ ಪಾಪಗಳಲ್ಲೊಂದು ಎಂದರು ಸ್ವಾಮಿ ವಿವೇಕಾನಂದರು. ಸಾಮಾನ್ಯರನ್ನು ಕೇಂದ್ರಸ್ಥಾನದಲ್ಲಿ ಇರಿಸಿಕೊಂಡದ್ದು ರಾಮಕೃಷ್ಣ–ವಿವೇಕಾನಂದ ತಾತ್ತ್ವಿಕತೆಯ ಪ್ರಮುಖ ಲಕ್ಷಣಗಳಲ್ಲೊಂದು. ಶ್ರೀರಾಮಕೃಷ್ಣರಾದರೋ ಅಕ್ಷರಶಃ ದೀನರ, ದರಿದ್ರರ ಸಾಲಿನಲ್ಲಿ ಹೋಗಿ ಕುಳಿತುಬಿಟ್ಟವರು; 'ದರಿದ್ರದೇವೋ ಭವ' ಎಂಬ ಹೊಸ ಮಂತ್ರವನ್ನು ಸ್ವಾಮಿ ವಿವೇಕಾನಂದರ ಮೂಲಕ ನೀಡಿದವರು. ಆಧುನಿಕ ಸಂದರ್ಭದಲ್ಲಿ ಧರ್ಮ–ಅಧ್ಯಾತ್ಮಗಳಿಗೆ ಸಾಮಾನ್ಯತೆಯ ಸ್ಪರ್ಶ ಬಂದದ್ದು ಹೀಗೆ.

ಹಿಂದೆಯೇ ಹೇಳಿದಂತೆ ಶ್ರೀರಾಮಕೃಷ್ಣರ ಜೀವನವೆಂಬುದೇ ಒಂದು ಬಗೆಯ ವಿಶಿಷ್ಟ ಭಾಷೆ. ಅದು ಅತ್ಯಂತ ಸಹಜ ಮತ್ತು ಸರಳ. ಅದರಲ್ಲಿ ಆಲಂಕಾರಿಕ ಉಕ್ತಿಗಳಿಲ್ಲ; ಅದು ಪ್ರದರ್ಶನದ ವಸ್ತುವಾಗುವುದಿಲ್ಲ; ಅಲ್ಲಿ ಜೋರುದನಿಯಿಲ್ಲ; ವಾಗ್ಮಿತೆಯಿಂದ ವಾದಪ್ರತಿವಾದಗಳಿಗೆ ಎಡೆಮಾಡಿಕೊಡುವುದಿಲ್ಲ. ಬದಲಾಗಿ ಪ್ರೀತಿಯ ಸಲ್ಲಾಪದಲ್ಲಿ ಎಲ್ಲರನ್ನೂ ಜೊತೆಗೂಡಿಸುತ್ತದೆ; ತನ್ನೊಂದಿಗೆ ಕರೆದೊಯ್ಯುತ್ತದೆ.

ಶ್ರೀರಾಮಕೃಷ್ಣರ ಸುತ್ತ ಸೇರಿದ ಭಕ್ತಸಮುದಾಯವನ್ನು, ಈ ಸಮುದಾಯದೊಂದಿಗೆ ಶ್ರೀರಾಮಕೃಷ್ಣರು ಹೊಂದಿದ್ದ ಸಂಬಂಧದ ಸ್ವರೂಪದ ಹಿನ್ನೆಲೆಯಲ್ಲಿ ಒಂದಿಷ್ಟು ಗಮನಿಸಬಹುದು. ಹಾಗೆ ನೋಡಿದರೆ ಅವರೆಲ್ಲರನ್ನೂ 'ಭಕ್ತರು' ಎಂದು ನಿರ್ದೇಶಿಸುವುದೂ ಕಷ್ಟವೆ. ಆದರೆ ಒಂದಂತೂ ನಿಜ. ಅವರೆಲ್ಲ ನಾನಾ ವರ್ಗ ವರ್ಣ ಅಂತಸ್ತುಗಳಿಗೆ ಸೇರಿದವರಾಗಿದ್ದರೂ ಒಂದೋ ಅತ್ಯಂತ ಸಾಧಾರಣ ವ್ಯಕ್ತಿಗಳಾಗಿದ್ದರು ಇಲ್ಲವೇ ತಮ್ಮ 'ವಿಶಿಷ್ಟತೆ'ಯನ್ನು ಬದಿಗೊತ್ತಿ ಸಾಧಾರಣರೊಂದಿಗೆ ಸಾಧಾರಣರಾಗಿ ಬೆರೆಯಬಲ್ಲ ಮನೋಧರ್ಮದವರಾಗಿದ್ದರು. ಇನ್ನು ಶ್ರೀರಾಮಕೃಷ್ಣರಂತೂ ತಮ್ಮ ಭಕ್ತಸಮುದಾಯದ ನಡುವೆ ಎಂದೂ ಪೀಠಸ್ಥರಾಗಲಿಲ್ಲ. ಇತರರು ಬಂದು ಅವರನ್ನು ಕಂಡು ಮಾತನಾಡುವ ಸಂಬಂಧವಾಗಿ ಯಾವ ವಿಧಿನಿಷೇಧಗಳೂ ಇರಲಿಲ್ಲ. ಅಷ್ಟೇಕೆ, ಯಾರನ್ನಾದರೂ ಕಾಣಬೇಕೆಂದರೆ ಸ್ವತಃ ಶ್ರೀರಾಮಕೃಷ್ಣರೇ ಯಾವ ಉಪಚಾರಕ್ಕೂ ಕಾಯದೆ ತಾವೇ ಗಾಡಿ ಮಾಡಿಕೊಂಡು ಹೋಗುತ್ತಿದ್ದ ಉದಾ ಹರಣೆಗಳೇ ಹೆಚ್ಚು.

ಇನ್ನು ನಮಸ್ಕಾರದ ವಿಷಯದಲ್ಲಿಯೂ ಅಷ್ಟೆ. ಮೊದಲು ನಮಸ್ಕರಿಸುವುದೇ ಅವರ ಪದ್ಧತಿ. ಅಷ್ಟೇ ಅಲ್ಲ, ಕೆಲವೊಮ್ಮೆ ಈ ನಮಸ್ಕಾರ ಪ್ರತಿನಮಸ್ಕಾರಗಳ ಸರಣಿಗೆ ಅಂತ್ಯವೇ ಇರುತ್ತಿರಲಿಲ್ಲ. "ಅವರು ತಮ್ಮ ನಮಸ್ಕಾರಾಸ್ತ್ರದಿಂದಲೇ ನಮ್ಮೆಲ್ಲರನ್ನೂ ಗೆದ್ದರು" ಎಂದಿದ್ದಾನೆ ಗಿರೀಶ್‌ಚಂದ್ರ ಘೋಷ್. ಮಾನವತೆಯ ಮಾಧುರ್ಯಕ್ಕೆ ಇದಕ್ಕಿಂತ ಉತ್ತಮವಾದ ನಿದರ್ಶನಗಳನ್ನು ಇನ್ನೆಲ್ಲಿಂದ ಹುಡುಕಿ ತರೋಣ?

ಶ್ರೀರಾಮಕೃಷ್ಣರ ಜೀವನದ ಇನ್ನೊಂದು ವಿಶೇಷ ಆಯಾಮದ ಕಡೆಗೆ ನಾವು ಗಮನವನ್ನು ಹರಿಯಿಸಬೇಕು. ಅವರು ತಮ್ಮ ಅಸಾಮಾನ್ಯ ಸಾಧನೆಗಳ ಮೂಲಕ ಅಸಾಮಾನ್ಯ ಸಿದ್ಧಿಯ ಶಿಖರಗಳಲ್ಲಿ ವಿಹರಿಸಿದರು. ಸಮಾಧಿಗೇರುವುದೆಂದರೆ ಅವರಿಗೆ ಉಸಿರಾಟದಷ್ಟೇ ಸಹಜವಾಗಿತ್ತು. ಅವರು ಬಲವಂತವಾಗಿ ತಮ್ಮ ಮನಸ್ಸನ್ನು ಲೌಕಿಕಸ್ತರಕ್ಕೆ ಎಳೆದು ತರಬೇಕಾಗುತ್ತಿತ್ತು. ಹೀಗಿದ್ದರೂ ಲೋಕದ ಜನರೊಂದಿಗೆ ಸಂಪರ್ಕವನ್ನು ಸಾಧಿಸಲು ಅವರು ಆರಿಸಿಕೊಂಡ ದಾರಿ ಮಾತ್ರ ಸಾಮಾನ್ಯ ಜನತೆಯದು. ಅವರು ಸಂಸ್ಕೃತವನ್ನು ಕಲಿತು ಶಾಸ್ತ್ರಪಾಂಡಿತ್ಯವನ್ನು ಸಂಪಾದಿಸಲಿಲ್ಲ; ವೇದೋಪನಿಷತ್ತುಗಳನ್ನು ಉದಾಹರಿಸಿ ಪೀಠದ ಮೇಲೆ ಕುಳಿತು ಉಪನ್ಯಾಸಗಳನ್ನು ಮಾಡಲಿಲ್ಲ. ತಮ್ಮನ್ನು ಭೇಟಿಯಾದವರೊಂದಿಗೆ, ತಾವು ಭೇಟಿಯಾದವರೊಂದಿಗೆ, ದಿನನಿತ್ಯದ ಸಂಭಾಷಣೆಯ ಸಂದರ್ಭದಲ್ಲಿ ತಮ್ಮ ವಿಚಾರಗಳನ್ನು ಹಂಚಿಕೊಂಡರು. ಸಂವಾದ ಎನ್ನುವುದೇ ಸಾಮಾನ್ಯತೆಯ ಪರಿಭಾಷೆ. ಏಕೆಂದರೆ ಪಂಡಿತ ಮಂಡಳಿಯಲ್ಲಿ ಸಾಮಾನ್ಯರು ಬಾಯಿಬಿಡುವಂತಿಲ್ಲ; ಅಲ್ಲಿ ಕಿವಿಗಳನ್ನು ಮಾತ್ರ ತೆರೆದಿಡಲು ಅವಕಾಶವಿದೆ. ಆದರೆ ಇಲ್ಲಿ ಹಾಗಲ್ಲ. ಪ್ರತಿಯೊಬ್ಬರಿಗೂ ಇಲ್ಲಿ ಪ್ರವೇಶದ ಅವಕಾಶವಿದೆ. ತಮ್ಮ ಸಂದೇಹಗಳನ್ನು ತೆರೆದಿಡಬಹುದು.

ಈ ದೃಷ್ಟಿಯಿಂದ ಶ್ರೀರಾಮಕೃಷ್ಣರ 'ಕಥಾಮೃತ' ಕ್ಕೆ ಸಮಕಾಲೀನ ಸಂದರ್ಭದಲ್ಲಿ ಒಂದು ರೂಪಕಾತ್ಮಕವಾದ ಸ್ವರೂಪವಿದೆ. ಇತರ ಧರ್ಮಗ್ರಂಥಗಳು ಅಂದು–ಆಗ ನಿರ್ಮಾಣಗೊಂಡಿದ್ದು, ಅವುಗಳ ಕಾಲದೇಶಗಳೂ ಬೇರೆಬೇರೆಯೇ. ಅವುಗಳಿಗೆ ಹೆಚ್ಚೆಂದರೆ ನಾವು ಓದುಗರಾಗಬಲ್ಲೆವು. ಅವುಗಳದು ಸಂವೃತ ಮಾದರಿಯ ರಚನೆ (Closed Structure). ಆದರೆ ಕಥಾಮೃತ ಹೀಗಲ್ಲ. ಅದು ಇಂದು – ಈಗ ಸಂಭವಿಸುತ್ತಿರುವಂತಿದೆ. ಅಲ್ಲದೆ ಅಲ್ಲಿ ನಮಗೆ ಎದುರಾಗುವುದು ನಮ್ಮ ದಿನನಿತ್ಯದ ಪರಿಚಿತ ಜಗತ್ತಿನ ಇನ್ನೊಂದು ವಿಸ್ತರಣೆಯೇ ಹೊರತು ಅಲ್ಲಿ ಯಾವುದೂ ನಮಗೆ ಆಗಂತುಕವಲ್ಲ. ಅಲ್ಲಿ ಎಲ್ಲವೂ, ಎಲ್ಲರೂ ನಮ್ಮನ್ನು ಸ್ವಾಗತಿಸಿ ಒಳಗೆ ಕರೆದುಕೊಳ್ಳುವುದಕ್ಕೆ ಅವಕಾಶವಿದೆ. ಇಲ್ಲಿ ನಾವು ಓದುಗ ರಾಗುವುದಿಲ್ಲ, ಪಾಲುದಾರರಾಗುತ್ತೇವೆ.

ಅಭಿವ್ಯಕ್ತಿಯ ದೃಷ್ಟಿಯಿಂದ ಕಥಾಮೃತದ ವಿನ್ಯಾಸವೇ ಭಾಗವಹಿಸುವಿಕೆಯನ್ನು ಆಹ್ವಾನಿಸುವಂಥದು. ಇಷ್ಟಲ್ಲದೆ ಅದು ನಮ್ಮಂತೆಯೇ ಇಲ್ಲಿ ಬದುಕಿಬಾಳಿದ ವ್ಯಕ್ತಿಯೊಬ್ಬನ ದಿನಚರಿಯಾಗಿರುವುದರಿಂದ ಇಲ್ಲಿ ಯಾವುದೂ ಅಮೂರ್ತವಲ್ಲ. ದಿನಾಂಕ–ತಿಂಗಳು–ವರ್ಷ–ಮಾಸ–ತಿಥಿ–ಸ್ಥಳ–ಸಮಯ ಎಲ್ಲವೂ

ಇಲ್ಲಿ ಕರಾರುವಾಕ್ಕಾಗಿ ದಾಖಲಾಗಿವೆ. ಶ್ರೀರಾಮಕೃಷ್ಣರಂತಹ ಅವತಾರವೊಂದು ಬಹುಶಃ ಈ ಬಗೆಯಲ್ಲಿ ಮಾತ್ರವೇ ಮಾನವೀಯವಾಗಲು ಸಾಧ್ಯ ಮತ್ತು ಮಾನವೀಯವಾಗುವುದೆಂದರೆ ಸಾಮಾನ್ಯತಾಸ್ವರೂಪವನ್ನು ಧರಿಸುವುದು ಎಂಬುದನ್ನು ಬೇರೆ ಬಿಡಿಸಿ ಹೇಳಬೇಕಾಗಿಲ್ಲ.

ಇನ್ನು ಶ್ರೀರಾಮಕೃಷ್ಣರ ಉಪದೇಶಗಳ ಸ್ವರೂಪದ ಬಗೆಗಂತೂ ಹೆಚ್ಚು ಹೇಳಬೇಕಾಗಿಯೇ ಇಲ್ಲ. ಅದೊಂದು ಅತ್ಯದ್ಭುತವಾದ ಸಾಮಾನ್ಯತಾ ಪ್ರಪಂಚ. ದೈನಂದಿನ ಅತ್ಯಂತ ಸಾಧಾರಣ ಸಂಗತಿಗಳು ಯಾವುದೇ ಕೃತಕತೆಯ ಸೋಂಕಿಲ್ಲದೆ ಇಲ್ಲಿ ಅತ್ಯದ್ಭುತವಾದ ತತ್ತ್ವಗಳ ದರ್ಶನವನ್ನು ಮಾಡಿಸುತ್ತವೆ. ಇಲ್ಲಿನ ಉಪಮೆಗಳು, ದೃಷ್ಟಾಂತಗಳು, ಕಥಾನಕಗಳು ಎಲ್ಲವೂ ಈ ಲೋಕದ – ಇನ್ನಷ್ಟು ನಿರ್ದಿಷ್ಟಗೊಳಿಸುವುದಾದರೆ ಇಲ್ಲಿನ ಗ್ರಾಮ್ಯಜಗತ್ತಿನ – ವಿವರಗಳಿಂದ ಇಡಿಕಿರಿದಿವೆ. ಶ್ರೀರಾಮ ಕೃಷ್ಣರಂತಹ 'ಅಸಾಧಾರಣ' ಸಾಮಾನ್ಯತಾಮೂರ್ತಿಗಳು ಮಾತ್ರ ಬಹುಶಃ ಈ ಬಗೆಯ ಜಗತ್ತೊಂದನ್ನು ಕಟ್ಟಬಲ್ಲರೇನೊ.

ಇಂದಿನ ಸಮಕಾಲೀನ ಸಂದರ್ಭದಲ್ಲಿ ಶ್ರೀರಾಮಕೃಷ್ಣರ ಸಾಮಾನ್ಯತಾಪ್ರತಿಭೆ ನಮ್ಮ ಮುಂದೆ ತೆರೆಯುವ ಸಂದೇಶದ ಸ್ತರಗಳು ಹಲವು. ಹೇಳಿಕೇಳಿ ನಮ್ಮದು ಮಾಧ್ಯಮಗಳ ಯುಗ. ಸುದ್ದಿಯಿರಲಿ, ರಂಜನೆಯಿರಲಿ ಎಲ್ಲವನ್ನೂ ಬೃಹತೀಕರಿಸುವುದು ಅವುಗಳ ಸ್ವಭಾವ. ಈ ಭರಾಟೆಯಲ್ಲಿ ಮೌನ–ಶಾಂತಿಗಳ ನೆಲೆಯಲ್ಲಿ ಮಾತ್ರವೇ ಅನುಸಂಧಾನಕ್ಕೆ ಸಿಲುಕುವ ಸತ್ಯದ ಸಹಜ–ಸರಳ ವಾಸ್ತವತೆ ಎಲ್ಲೋ ಕಳೆದುಹೋಗುತ್ತದೆ.

ಇನ್ನೊಂದು ನೆಲೆಯಿಂದ ನೋಡುವುದಾದರೆ ಮಾಧ್ಯಮಗಳನ್ನು ಉಪಕರಣವನ್ನಾಗಿ ಬಳಸಿಕೊಂಡು ಅಂತೂ ಇಂತೂ ಸುದ್ದಿ ಮಾಡುವುದು, ಪ್ರಸಿದ್ಧಿಯನ್ನು ಪಡೆಯುವುದು ಈ ಯುಗದ ಪರಮಾದರಣವೇನೋ ಎಂಬಂತೆ ಕಂಡುಬರುತ್ತಿದೆ. ಈ ಗದ್ದಲದಲ್ಲಿ ಆಸ್ತಿ–ಸಂಪತ್ತು–ಹಣ–ಅಧಿಕಾರ ಇವುಗಳ ಯಾವ ಬೆಂಬಲವೂ ಇಲ್ಲದ ಸಾಮಾನ್ಯನನ್ನು ಯಾರು ತಾನೇ ಕೇಳಬೇಕು? ವಿಪರ್ಯಾಸವೆಂದರೆ ನಮ್ಮ ಪ್ರಜಾಸತ್ತೆಯ ಮೂಲಾಧಾರ ಸಾಮಾನ್ಯನಾದರೂ ಸಮಾಜದ ಜೀವನಾಡಿಗಳೆಂದು ಬಿಂಬಿತರಾಗುತ್ತಿರುವವರು ಸುದ್ದಿಜೀವಿಗಳಿಂದ 'ಅಸಾಮಾನ್ಯ'ರೆಂದು ಪ್ರಕಾಶಕ್ಕೆ ಬರುವವರು.

ಆದರೆ ಶ್ರೀರಾಮಕೃಷ್ಣರ ಸಾಮಾನ್ಯತೆಯ ಆದರ್ಶ ಇಂದಾದರೂ ನಮ್ಮ ಕಣ್ತೆರೆಸಬೇಕು. ಅವರು ಎಂದಿಗೂ ಸುದ್ದಿಯಾಗಲು ಬಯಸಿದವರಲ್ಲ; ಕೀರ್ತಿಗಾಗಿ ಹಂಬಲಿಸಿದವರಲ್ಲ, ಅಣಿಮಾದಿ ಅಷ್ಟಸಿದ್ಧಿಗಳನ್ನು ಕಸದಂತೆ ಕಂಡವರು. ಕವಿ ಕುವೆಂಪು **'ಶ್ರೀಸಾಮಾನ್ಯನೆ ಭಗವದ್‌ಮಾನ್ಯಂ!'** ಎಂದು ಉದ್ಗರಿಸಿರುವುದರ ಹಿನ್ನೆಲೆಯಲ್ಲಿಯೂ ಈ ಆದರ್ಶವಿರುವುದನ್ನು ಗಮನಿಸಬೇಕು. ಭಕ್ತರ ಸಮಾರಾಧನೆಯಲ್ಲಿ ಪ್ರಧಾನಪಂಕ್ತಿಯನ್ನು ನಿರೀಕ್ಷಿಸುವ ಮಾತಂತಿರಲಿ, ಧೂಳು ತುಂಬಿದ ಮೂಲೆಯೊಂದರಲ್ಲಿ ಕುಳಿತು, ಬಡಿಸಿದ್ದನ್ನು ಗೊಣಗದೆ ಊಟಮಾಡಿ ಬರುತ್ತಿದ್ದ ಇಂತಹ ಮಹಾತ್ಮನನ್ನು ಇನ್ನೆಲ್ಲಿ ಕಾಣಲು ಸಾಧ್ಯ? ಸಾಮಾನ್ಯರಿಗಾಗಿ ಸಾಮಾನ್ಯನಾಗಿ ಬಾಳಿದ ಈ ವ್ಯಕ್ತಿ ನಮ್ಮ ಸರ್ವೋದಯದ ಆದರ್ಶಕ್ಕೆ ಸ್ಫೂರ್ತಿಯನ್ನು ನೀಡದಿದ್ದರೆ ಬಹುಶಃ ಮತ್ತಾರು ತಾನೇ ನೀಡಿಯಾರು?



## ಸ್ವಾಮಿ ಜಗದಾತ್ಮಾನಂದರ 'ಬದುಕಲು ಕಲಿಯಿರಿ' ಗ್ರಂಥವನ್ನು ಓದಿದಾಗ

ಗ್ರಂಥವಲ್ಲವಿದು ಚೊಕ್ಕ ರತ್ನವಿದು ಬದುಕ ಕಲಿಯಿರೆಂಬ
ಹೃದಯ ಮೆದುಳಿನಲಿ ಹಬ್ಬಿ ತಬ್ಬಿರುವ ತಮಕೆ ಸೂರ್ಯಬಿಂಬ
ಆ ವಿವೇಕಮುನಿ ವಾಣಿಯಿಲ್ಲದೆಯೊ ಪಂಕ್ತಿಪಂಕ್ತಿಯಲ್ಲಿ
ಭಾನುಸದೃಶ ಮುನಿ ಮುಂದುವರಿದಿಹನು 'ಜಗದ ಆತ್ಮರಲ್ಲಿ' [೧]

ಇದನು ಓದಿ ವಿಜ್ಞಾನಕಾಯ್ತು ಬಲು ಅದರ ಅಲ್ಪಜ್ಞಾನ
ಸರ್ವಕುಮನಗಳು ಸುಮನವಾಗುತಿವೆ ಸ್ವಾರ್ಥಕಿಲ್ಲ ಸ್ಥಾನ
ದುಷ್ಟರಾಷ್ಟ್ರರಿಗೆ ಮಾರ್ಗಭ್ರಷ್ಟರಿಗೆ ಶಿಷ್ಟ ಮಾರ್ಗವಿಲ್ಲಿ
ಸುಪ್ತವ್ಯಾಘ್ರಗಳು ತಪ್ತವಾಗುತಿವೆ ವೀರವಾಕ್ಯದಲ್ಲಿ [೨]

ವೀರಭಾವಗಳ ಮಾತೆ ಲೇಖನಿಯು ಲೇಖ ರಾಷ್ಟ್ರಶಕ್ತಿ
ಮನದೊಳಲ್ಲದಲೆ ಮೆದುಳಿನಲ್ಲಿ ಸಹ ಉರಿಯನೆಬಿಪಯುಕ್ತಿ
ಧೀರ ದಿನಕರರ ವೀರವಾಣಿಗೀ ಸಾಕ್ಷಿ ತಮ್ಮ ಗ್ರಂಥ
ಪಂಥ ಕಾಣದಿಹ ಯುವತಿ ಯುವಕರಿಗೆ ಇದುವೆ ದಿವ್ಯಪಂಥ [೩]

ಶಬ್ದವಲ್ಲವಿವು ಗಗನವಜ್ರಗಳು ಅವಕೆ ಇಲ್ಲ ಜಂಬ
ವಾಕ್ಯವಲ್ಲವಿವು ಶಿವತ್ರಿಶೂಲಗಳು ಶ್ರೇಷ್ಠ ಗ್ರಂಥ ತುಂಬ
ಪುಟಗಳಲ್ಲ ಸಂಪುಟಗಳಾಗಿಹವು ಜ್ಞಾನಸುಧೆಯು ತುಂಬಿ
ಸುಮನ ಭಾವ ಸೌರಭವ ಸೂಸುತಿದೆ ಸ್ವರ್ಗತೋಟ ನಂಬಿ [೪]

ಸರ್ವವೇದಗಳ ಸರ್ವಶಾಸ್ತ್ರಗಳ ಕೆನೆಯು ಬೆಣ್ಣೆಯೆನಲೇ
ದುಷ್ಟಕಾಮನನು ಸುಡಲು ತೆರೆದ ಶಿವ ಹಣೆಯ ಕಣ್ಣೆಯೆನಲೇ
ಬಿದ್ದ ಜನವ ಬಲು ತಿದ್ದೆ ಎದ್ದ ಉದ್ಬುದ್ಧ ಬಾಂಬುಯೆನಲೇ
ಅಜ್ಞ ಜನಕೆ ವರಸುಜ್ಞ ಸುಧಿಯ ಸುಧೆ ಪೂರ್ಣಜಾಂಬುಯೆನಲೇ [೫]

ಇಲ್ಲಿ ರಾವಣರು ರಾಮರಾಗುವರು ಗ್ರಂಥವನ್ನು ಓದಿ
ಕಂಸರಂಥವರು ಕೃಷ್ಣರಾಗುವರು ಸುಧಿಯ ಸುಧೆಯ ಮೋಡಿ
ರಾಮದೂತರಾಗುವರು ಹೇಡಿಗಳು ಮಾಡಿ ಇದರ ಸಂಗ
ಕಲ್ಲು ಕರಗಿ ಸವಿ ಬೆಲ್ಲವಾಗುವುದು ಪಾಪ ಪುಣ್ಯ ರಂಗ [೬]

ವಿಶ್ವವಿದ್ಯಗಳು ಹ್ರಸ್ವವಾಗುವವು ಗ್ರಂಥರತ್ನದಲ್ಲಿ
ಗಗನಯಾನಗಳು ಗುಬ್ಬಿಯಾದವೀ ಗ್ರಂಥರತ್ನದಲ್ಲಿ
ಅಗ್ನಿ ಶಕಟತಾ ಉದ್ದ ಬಾಲಹುಳ ಝರಿಯು ಇದರ ಮುಂದೆ
ಮೇರು ಪರ್ವತವು ಚೂರು ನೆಲ್ಲಿಯೀ ಗ್ರಂಥರತ್ನ ಮುಂದೆ [೭]

ವೀರನಾರಿಯರು ಶೂರ ನರವರರು ಎಲ್ಲಿ ಇರುವರಲ್ಲಿ
ಅವರ ಲೇಖನಿಯು ಅಗ್ನಿ ಚೆಲ್ಲುವದು ಶಬ್ದ ಕಿಡಿಗಳಲ್ಲಿ
ಯಾರ ಹೃದಯದೊಳು ಮತ್ತೆ ಮೆದುಳಿನೊಳು
ಉರಿವ ಪಂಜು ಇಹುದು
ಭುಜದಿ ಮಿಂಚುಗಳು ಮನದಿ ಗುಂಡುಗಳು
ಸಿಡಿವ ಪುಂಜವಿಹುದು [೮]

ಸತ್ತು ಬಿದ್ದ ಜನ ಮತ್ತೆಯೇಳುವುದು ಶಬ್ದ ಗುಂಡು ತಾಗಿ
ಕೋಣ ಸಹಿತ ಬಲು ಜಾಣವಾಗುವುದು ವಾಕ್ಯ ಬಾಣ ತಾಗಿ
ಶಬ್ದ ಸಿಡಿಲಿನಿಂ ಗರ್ವಪರ್ವತವು ಆಯಿತಯ್ಯ ಚೂರ್ಣ
ಜಗವನುದ್ಧರಿಪ ಅಸ್ತ್ರಶಸ್ತ್ರದಿಂ ಗ್ರಂಥವಿಹುದು ಪೂರ್ಣ [೯]

ಮನದ ರೋಗಗಳ ಕಳಿವ ಗ್ರಂಥವಿದು ನಿಜಕು ವೈದ್ಯಶಾಲೆ
ಮಲ್ಲರನ್ನು ಘನ ಮಲ್ಲರಾಗಿಸುವ ನಿಜಕು ಮಲ್ಲಶಾಲೆ
ಸತ್ಯಘಟನೆಗಳ ಸಚ್ಚರಿತ್ರೆಗಳ ಶಬ್ದ ಚಿತ್ರಶಾಲೆ
ಬಾಲವೃದ್ಧರನಿರುದ್ಧರಾಗುವೊಲು ಸಿದ್ಧ ಮಂತ್ರಶಾಲೆ [೧೦]

– *'ರಂಗನಾಮ', ರಂ.ರಾ. ಕುಲಕರ್ಣಿ ನಿಡಗುಂದಿ, ಗುರುಕುಲ ಕುಕನೂರ*







# ಆರೋಗ್ಯಮಸ್ತು

**ಲೇಖಕರು** : ವೈದ್ಯ ಶ್ರೀವತ್ಸ ಭಾರದ್ವಾಜ ಮತ್ತು ವೈದ್ಯೆ ಅನಸೂಯ ದೇವಿ

**ಪ್ರಕಾಶಕರು** : ದತ್ತ ಪ್ರಕಾಶನ, 'ದತ್ತಂ', ಸಿ.ಜಿ. ಕಾಮತ್ ರಸ್ತೆ, ಕರಂಗಲಪಾಡಿ, ಮಂಗಳೂರು – ೫೭೫ ೦೦೪ ದೂರವಾಣಿ : ೦೮೨೪ – ೨೪೯೬೩೧೩

**ಬೆಲೆ** : ರೂ. ೨೦೦/–

**ಪುಟಗಳು** : ೧೯೨

ಡಾ. ಪಳ್ಳತ್ತಡ್ಕ ಕೇಶವ ಭಟ್ ಅಂತಾರಾಷ್ಟ್ರೀಯ ಖ್ಯಾತಿಯ ಸಸ್ಯವಿಜ್ಞಾನಿ ಪ್ರೊ. ಬಿ.ಜಿ.ಎಲ್. ಸ್ವಾಮಿಯವರ ಶಿಷ್ಯರಲ್ಲಿ ಅಗ್ರಗಣ್ಯರು. ತಾವು ಕೆಲಸ ಮಾಡುತ್ತಿದ್ದ ವೆನಿಜೂಲಾ ಹಾಗೂ ಭಾರತದಲ್ಲಿ ಸರಳ ಪರಿಹಾರಗಳಿಂದ ಸಾವಿರಾರು ರೋಗಿಗಳ ಕಠಿಣ ರೋಗಗಳನ್ನು ಗುಣಪಡಿಸಿ ಇವರು ಅಪಾರ ಖ್ಯಾತಿ ಹೊಂದಿದ್ದರು. 'ಚಿಕಿತ್ಸೆ ರೋಗಕ್ಕಲ್ಲ, ರೋಗಿಗೆ' ಎಂಬ ಸಿದ್ಧಾಂತ ಇವರದು. ಪ್ರತಿಯೊಬ್ಬ ರೋಗಿಗೂ ಅವನು ಬಳಲುತ್ತಿರುವ ಸಮಸ್ಯೆಯ ಮೂಲವನ್ನು ತಿಳಿಸಿಕೊಡುವ ಒಂದು ಪುಸ್ತಕವನ್ನು ಬರೆಯಬೇಕೆಂಬ ಇಚ್ಛೆ ಇದ್ದರೂ, ಭಟ್ಟರು ಅದಕ್ಕೆ ಮುನ್ನವೇ ವಿಧಿವಶರಾದರು.

ಡಾ. ಕೇಶವಭಟ್ಟರ ಅಳಿಯ ವೈದ್ಯ ಶ್ರೀವತ್ಸ ಭಾರದ್ವಾಜ ಮತ್ತು ಮಗಳು ವೈದ್ಯೆ ಅನಸೂಯ ದೇವಿ – ಇವರಿಬ್ಬರೂ ಭಟ್ಟರ ಜ್ಞಾನವನ್ನೂ, ವೈದ್ಯರಾಗಿ ತಮ್ಮ ಅನುಭವವನ್ನೂ ಮೇಳೈಸಿ, ಸ್ವಸ್ಥಜೀವನದ ಗುಟ್ಟನ್ನು ತಿಳಿಸುವ **'ಆರೋಗ್ಯಮಸ್ತು'** ಗ್ರಂಥವನ್ನು ರಚಿಸಿದ್ದಾರೆ. ಇದು ರೋಗನಿದಾನವನ್ನಾಗಲಿ, ಔಷಧ ಚಿಕಿತ್ಸೆಯನ್ನಾಗಲಿ ತಿಳಿಸುವ ವೈದ್ಯಕೀಯ ಗ್ರಂಥವಲ್ಲ. ನಮ್ಮ ಆರೋಗ್ಯದ ಮೂಲವು ನಮ್ಮ ಜೀವನಶೈಲಿಯಲ್ಲಿ, ನಮ್ಮ ಅಡುಗೆ ಮನೆಯಲ್ಲಿಯೇ ಇದೆ ಎಂದು ತಿಳಿಸುವ ಒಂದು ಉಪಯುಕ್ತ ಜೀವನೋಪಯೋಗಿ ಗ್ರಂಥ.

ಪುಸ್ತಕದ ವಿಷಯವನ್ನು ಸ್ಥೂಲವಾಗಿ ಮೂರು ಭಾಗಗಳನ್ನಾಗಿ ಮಾಡಬಹುದು: ೧. ಆರೋಗ್ಯಕ್ಕಾಗಿ ಆಹಾರ–ವಿಹಾರ–ವ್ಯಾಯಾಮ–ವಿರಾಮಗಳನ್ನು ಮೊದಲ ೬೦ ಪುಟಗಳಲ್ಲಿ ತಿಳಿಸಿ ಕೊಟ್ಟಿದ್ದಾರೆ. ೨. ಅನೇಕ ರೋಗಗಳಿಗೆ ಮೂಲವಾದ ಶರೀರದ ಮಲಗಳು; ಅವುಗಳ ವಿಸರ್ಜನೆಯಲ್ಲಿ ಉಂಟಾಗುವ ತೊಡಕಿನಿಂದ ಹೇಗೆ ಅನೇಕ ಸಮಸ್ಯೆಗಳು ಉಂಟಾಗುತ್ತವೆ; ಬರೀ ಹೊರಲಕ್ಷಣಕ್ಕೆ ಔಷಧ ನೀಡಿದಾಗ ಗುಣವಾದಂತೆ ಅನಿಸಿದರೂ ಹೇಗೆ ರೋಗವು ಮತ್ತೆ ಮರುಕಳಿಸುತ್ತದೆ ಎಂಬುದನ್ನು ನಂತರದ ಸುಮಾರು ೯೦ ಪುಟಗಳಲ್ಲಿ ವಿಸ್ತಾರವಾಗಿ ವಿವೇಚಿಸಿದ್ದಾರೆ. ೩. ಮೂರನೆ ಹಂತದಲ್ಲಿ ಭಾರತೀಯ ಅಡುಗೆಯು ಹೇಗೆ ಆರೋಗ್ಯಕರ ಜೀವನಕ್ಕೆ ಅನುಕೂಲಕರವಾಗಿದ್ದು, ಔಷಧೀಯ ಗುಣಗಳನ್ನು ಹೊಂದಿದೆ ಎಂಬುದನ್ನು ತಿಳಿಸಿ ವಿವಿಧ ಸಾಂಪ್ರದಾಯಿಕ ಅಡುಗೆಗಳನ್ನು ಪರಿಚಯಿಸಿದ್ದಾರೆ.

ಲೇಖಕರ ಚಿಂತನೆಯ ಸಾರ **'ಆರೋಗ್ಯ ಎಂದರೇನು?'** ಎಂಬ ಮೊದಲ ಅಧ್ಯಾಯದಲ್ಲಿದೆ. ದೇಹದ ದೋಷಗಳು ಸಮನಾಗಿದ್ದು, ಮಲಗಳು ಸರಿಯಾಗಿ, ಸಮಯಾನುಸಾರವಾಗಿ ಹೊರಹೋಗುತ್ತಿದ್ದು, ಮನಸ್ಸು–ಇಂದ್ರಿಯ–ಆತ್ಮ ಇವು ಮೂರೂ ಪ್ರಸನ್ನವಾಗಿರುವುದೇ ಆರೋಗ್ಯ. ಇದು ಮೂರು ರೀತಿಯದ್ದು: ಶಾರೀರಿಕ ಆರೋಗ್ಯ, ಮಾನಸಿಕ ಆರೋಗ್ಯ, ಆಧ್ಯಾತ್ಮಿಕ ಆರೋಗ್ಯ. ಈ ಆರೋಗ್ಯಗಳನ್ನು ಸಾಧಿಸಲು ಪಂಚಕೋಶಗಳ (ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ) ಶುದ್ಧಿ ಅತ್ಯಗತ್ಯ. ಈ ಗ್ರಂಥದಲ್ಲಿ ಅನ್ನಮಯ ಹಾಗೂ ಪ್ರಾಣಮಯ ಕೋಶಗಳನ್ನು ಶುದ್ಧಗೊಳಿಸುವ ಬಗ್ಗೆ ಚೆನ್ನಾಗಿ ವಿವರಿಸಲಾಗಿದೆ.

ನಮ್ಮ ದೇಹ ಕ್ಷಾರೀಯ ಗುಣವುಳ್ಳ, ದೇಹಪೋಷಕವಾದ ರಸಸಾಗರದಿಂದ ತುಂಬಿದ್ದು, ಇದರ ಕಶ್ಮಲಗಳನ್ನು ವಾಹಕವಾದ ರಕ್ತವು ಹೊರಹಾಕುತ್ತದೆ. ರಕ್ತದ ಪ್ರತಿಕಣವೂ ರಸದಿಂದ ಅಗತ್ಯವಾದ ಸತ್ವವನ್ನು ಹೀರಿಕೊಂಡು, ಉತ್ಪತ್ತಿಯಾದ ಕಶ್ಮಲವನ್ನು ಹೊರಕ್ಕೆ ಬಿಡುಗಡೆಮಾಡುತ್ತದೆ. ಪೋಷಕಾಂಶಗಳು ಇಲ್ಲದ ಆಹಾರದಿಂದ ರಸಕ್ಕೆ ಸತ್ವಾಂಶದ ಪೂರೈಕೆಯಾಗದೆ ಅದು ಆಮ್ಲೀಯವಾಗುತ್ತದೆ. ಈ ಕಾರಣದಿಂದಲೂ ಹಾಗೂ ಹೊರ ಹೋಗದ ಕಶ್ಮಲಗಳಿಂದಲೂ ರೋಗ ಉತ್ಪತ್ತಿಯಾಗುತ್ತದೆ.

**ಆಹಾರ:** ತನ್ನ ಅಗ್ನಿಬಲ ಮತ್ತು ದೇಹಪ್ರಕೃತಿಗೆ ಅನುಗುಣವಾದ ಆಹಾರವನ್ನು ರೋಗಿ ಸೇವಿಸಬೇಕು. ಆರೂ ರಸಗಳು ಸಮತೋಲನಗೊಳ್ಳುವಂತೆ ಆಹಾರಕ್ಕೆ ಯಾವ ವಸ್ತುಗಳನ್ನು ಬಳಸಬೇಕು, ಹೇಗೆ ಅವು ಸರಿಯಾಗಿ ಪಾಕಗೊಳ್ಳಬೇಕು ಎಂದು ತಿಳಿಯಲು ಸ್ವತಃ ಪಾಕಶಾಸ್ತ್ರ ಪರಿಣತಿ ಪಡೆಯುವುದು ಒಳ್ಳೆಯ ವೈದ್ಯನಿಗೆ ಇರಲೇಬೇಕಾದ ಅರ್ಹತೆ. ರೋಗ ಬಾರದಂತೆ ಆರೋಗ್ಯ ಕಾಪಾಡಿಕೊಳ್ಳಲು, ರೋಗ ಬಂದಾಗ ಇದೇ ಆಹಾರದಿಂದ ಆ ರೋಗಗಳ ನಿವಾರಣೆ ಹೇಗೆ ಮಾಡುವುದೆಂದು ತಿಳಿಯಲು ಚೆನ್ನಾಗಿ ಅಡುಗೆ ಗೊತ್ತಿರಬೇಕು ಎಂಬುದು ಡಾ. ಕೇಶವಭಟ್ಟರ ಅಭಿಪ್ರಾಯ. ಕಾಫಿ, ಚಹಾ, ಕೋಕೋ, ಹಸಿ ಹಾಗೂ ಕೆಂಪು

ಮೆಣಸಿನಕಾಯಿ, ಟೊಮ್ಯಾಟೋ, ಸೋಯಾ, ಬಿಳಿಸಕ್ಕರೆ, ಮೈದಾ, ಬಿಳಿ ಅಕ್ಕಿ, ಬಾಂಬೆ ರವೆ, ಮಾಂಸಾಹಾರ, ಕರಿದ ಪದಾರ್ಥಗಳು, ಕೃತಕ ಬಣ್ಣ, ಕೃತಕ ಪರಿಮಳ ದ್ರವ್ಯಗಳು – ಇವೆಲ್ಲಾ ಹೇಗೆ ಹಾನಿಕರ ಎಂಬ ವಿವರ ಈ ಪುಸ್ತಕದಲ್ಲಿದೆ. ಹಿತ–ಮಿತವಾದ, ಋತುವಿಗನುಸಾರವಾದ ಆಹಾರವನ್ನು, ಸಕಾಲದಲ್ಲಿ, ಹಸಿವಾದಾಗ ಮಾತ್ರ ತಿನ್ನಬೇಕು. ವ್ಯಾಯಾಮ, ವಿಹಾರಗಳ ಶೀರ್ಷಿಕೆಯಡಿ ಕಟಿಸ್ನಾನ, ಎಣ್ಣೆಸ್ನಾನ, ಮಣ್ಣುಸ್ನಾನಗಳು ಮತ್ತು ಮಸಾಜ್ ವಿಧಾನವನ್ನು ತಿಳಿಸಿ, ಇವು ಹೇಗೆ ಶರೀರದ ಕಶ್ಮಲ ನಿವಾರಣೆ ಮಾಡಿ, ರೋಗ ನಿರೋಧ ಮಾಡುತ್ತವೆಂದು ವಿವರಿಸಲಾಗಿದೆ. ಸರಿಯಾದ ಸ್ಥಳ, ಸಮಯದಲ್ಲಿ ತೆಗೆದುಕೊಳ್ಳಬೇಕಾದ ವಿಶ್ರಾಂತಿಯ ಆವಶ್ಯಕತೆಯನ್ನೂ ಇಲ್ಲಿ ವಿವರಿಸಲಾಗಿದೆ.

**ಶರೀರದ ಮಲಗಳು ಹಾಗೂ ನೇತ್ರಸಂರಕ್ಷಣೆ:** ರೋಗದ ಮೂಲಕಾರಣವನ್ನು ತಿಳಿಸುವ ಪಠ್ಯ ಈ ಪುಸ್ತಕದ ಪ್ರಮುಖ ಭಾಗ. ಕೆಟ್ಟ ಆಹಾರ ಹಾಗೂ ಸರಿಯಲ್ಲದ ಜೀವನಶೈಲಿಯಿಂದಾಗಿ ಹೇಗೆ ರೋಗಗಳು ಬರಲು ಆಸ್ಪದವಾಗುವುದೋ ಅದೇ ರೀತಿ ಶೇಖರಣೆಯಾದ ಕಶ್ಮಲಗಳಿಂದಲೂ ನಾನಾ ರೀತಿಯ ಸಮಸ್ಯೆಗಳು ಬರುತ್ತವೆ. ದೇಹ ವಿಸರ್ಜಿಸುವ ಕಶ್ಮಲಗಳಲ್ಲಿ ಮುಖ್ಯವಾದುವು ಮೂರು: ಮಲ, ಮೂತ್ರ ಮತ್ತು ಬೆವರು. ಕಣ್ಣು, ಕಿವಿ, ಮೂಗು, ಪಿತ್ತಕೋಶಗಳಿಂದಲೂ ಕಶ್ಮಲಗಳು ಅಲ್ಪ ಪ್ರಮಾಣದಲ್ಲಿ ಹೊರಬೀಳುತ್ತವೆ; ಉತ್ಪತ್ತಿಯಾದೊಡನೆ ಹೊರಬೀಳದೆ ದೇಹದಲ್ಲಿಯೇ ಸಂಗ್ರಹಿತವಾಗುವ ಕಶ್ಮಲಗಳು ಸಮಸ್ಯೆಗಳಿಗೆ ಕಾರಣವಾಗುತ್ತವೆ. ಇವು ಸರಿಯಾಗಿ ಹೊರಬಿದ್ದಾಗ ಹಗುರ ಭಾವನೆ, ಉತ್ಸಾಹ, ವಿವಿಧ ಅಂಗಗಳಲ್ಲಿನ ನೋವು ಸೆಳೆತಗಳ ನಿವಾರಣೆ, ಸರಿಯಾದ ಸಮಯಕ್ಕೆ ಹಸಿವು, ಚೆನ್ನಾದ ನಿದ್ರೆ, ದೇಹ–ಬಾಯಿಗಳ ದುರ್ಗಂಧ ನಿವಾರಣೆ – ಇವೆಲ್ಲ ತಾನೇತಾನಾಗಿ ಉಂಟಾಗುತ್ತವೆ. ಮಲಶೋಧನೆ ಸರಿಯಾಗಿ ಆಗದಿದ್ದಾಗ ಅದು ಹೇಗೆ ವಿವಿಧ ಅಂಗಗಳ ಮೇಲೆ ಒತ್ತಡ ಬೀರಿ, ಹಲವಾರು ವಿಧದ ರೋಗಗಳಿಗೆ ಕಾರಣವಾಗುವುದೆಂದು ಇಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ. ಇದೇ ಈ ಗ್ರಂಥದ ಅನನ್ಯತೆ.

ಮಲಬದ್ಧತೆ ಅಜೀರ್ಣಕ್ಕೆ ಕಾರಣವಾಗಿ, ಜೀರ್ಣಕ್ರಿಯೆಗಾಗಿ ಪಿತ್ತರಸ ಅಧಿಕವಾಗಿ ಬಿಡುಗಡೆ ಆಗುತ್ತದೆ. ಸಿಟ್ಟು, ತಲೆನೋವು, ಉದ್ರೇಕಗಳು ಇದರ ಪರಿಣಾಮ. ಅಧಿಕ ಪಿತ್ತರಸ ಪಿತ್ತಕೋಶದಲ್ಲೇ ಉಳಿದಾಗ ಪಿತ್ತಕೋಶದಲ್ಲಿ ಕಲ್ಲುಗಳು ಉತ್ಪತ್ತಿಯಾಗುತ್ತವೆ; ಕರುಳಲ್ಲಿ ಹೆಚ್ಚು ಸಮಯ ಉಳಿದ ಆಹಾರವು ಕೊಳೆತು, ವಾಯು ಹೆಚ್ಚಾಗಿ ಮೂಳೆ–ಗಂಟುಗಳ ನೋವಿಗೆ ಕಾರಣವಾಗುತ್ತದೆ. ಅಧಿಕವಾಗಿ ಸಂಗ್ರಹಗೊಂಡ ಮಲದಿಂದ ಒತ್ತಡ ಉಂಟಾದಾಗ ದೀರ್ಘಕಾಲೀನ ರೋಗಗಳಾದ ಮೂಲವ್ಯಾಧಿ ಮುಂತಾದವು ಉಂಟಾಗುತ್ತವೆ; ಕರುಳಿಗೆ ಹೆಚ್ಚು ರಕ್ತ ಕಳಿಸಲು ಹೃದಯ ಪ್ರಯತ್ನಿಸಿದಾಗ ರಕ್ತದ ಒತ್ತಡ ಉಂಟಾಗುತ್ತದೆ. ಪಿತ್ತ ಅಧಿಕವಾದಾಗ ಕಣ್ಣಿನ ತೊಂದರೆ ಕಾಣಿಸಿಕೊಳ್ಳುತ್ತದೆ. ಹೊರಹೋಗದ ಪಿತ್ತದಿಂದಾಗಿ ಜ್ವರ, ರೋಗ ನಿರೋಧಕ ಶಕ್ತಿಯ ಕುಸಿತ ಹಾಗೂ ದೇಹದ ಆಮ್ಲೀಯತೆಗಳು ಹೆಚ್ಚಾಗಿ, ಹೊಟ್ಟೆಕರುಳುಗಳಲ್ಲಿ ಹುಣ್ಣು ಉಂಟಾಗುತ್ತದೆ. ಹೊರ ಹೋಗದ ಕಶ್ಮಲಗಳು ರಕ್ತದಲ್ಲಿ ಉಳಿದಾಗ ಪ್ರಮೇಹ ಉಂಟಾಗಿ, ಆ ಮೂಲಕ ಮಧುಮೇಹ, ಚರ್ಮದ ರೋಗಗಳು, ವೀರ್ಯಾಣುಗಳ ಕೊರತೆ, ಹರ್ನಿಯಾ ಹಾಗೂ ಹೆಂಗಸರಲ್ಲಿ ಮುಟ್ಟಿನ ಸಮಸ್ಯೆಗಳು ಉಂಟಾಗುತ್ತವೆ.

ಸರಿಯಾದ ಪ್ರಮಾಣದಲ್ಲಿ ನೀರನ್ನು ಸೇವಿಸದೆ ಇದ್ದಾಗ ದ್ರವರೂಪಿ ಮಲಗಳಾದ ಮೂತ್ರ, ಬೆವರು ಕಡಿಮೆ ಉತ್ಪತ್ತಿಯಾಗಿ, ಮೂತ್ರಪಿಂಡದ ಕಲ್ಲುಗಳು, ಮೂತ್ರನಾಳದ ಸೋಂಕು ಉಂಟಾಗುತ್ತದೆ. ಬೆವರು ಬರದಿದ್ದಾಗ ದೇಹದ ಉಷ್ಣತೆ ಹೆಚ್ಚಾಗಿ ಆಮ್ಲೀಯತೆ ಬರುತ್ತದೆ. ಕ್ರಮಬದ್ಧವಾದ ದೀರ್ಘವಾದ ಉಸಿರಾಟದಿಂದ ಅನಿಲರೂಪದ ಮಲಗಳು ದೇಹದಿಂದ ಹೊರಬರುತ್ತವೆ. ಇದಕ್ಕೆ ಪ್ರಾಣಾಯಾಮ ಸಹಕಾರಿ. ಈ ತೊಂದರೆಗಳಿಗೆ ಪರಿಹಾರವಾಗಿ ಮಲಶೋಧನೆಗೆ ಸಹಕಾರಿಯಾದ ಮೂತ್ರ–ಬೆವರನ್ನು ಶುದ್ಧಗೊಳಿಸಿ ನೇತ್ರಸಂರಕ್ಷಣೆ ಮಾಡುವ ಆಹಾರವನ್ನೂ, ಮನೆಮದ್ದುಗಳನ್ನೂ ಹಾಗೂ ಕಣ್ಣಿನ ಕಾಡಿಗೆ ಮಾಡುವ ವಿಧಾನಗಳನ್ನೂ ಮತ್ತು ಹಲವಾರು ವಿಧದ ಕಣ್ಣಿನ ವ್ಯಾಯಾಮಗಳನ್ನೂ ಲೇಖಕರು ವಿವರಿಸಿದ್ದಾರೆ. ಇವೆಲ್ಲ ಬಹಳ ಉಪಯುಕ್ತವಾಗಿವೆ.

ಮಾನಸಿಕ ಕಶ್ಮಲಗಳಾದ ಚಿಂತೆ ಮತ್ತು ಒತ್ತಡಗಳ ಪರಸ್ಪರ ಸಂಬಂಧ, ಅವುಗಳಿಂದ ಬರುವ ತಲೆನೋವು, ರಕ್ತದ ಒತ್ತಡ, ಚರ್ಮದ ಸಮಸ್ಯೆ, ಬೊಜ್ಜು – ಇವುಗಳ ನಿವಾರಣೆಗೆ ಮನೋಬಲ ವರ್ಧಿಸುವ ರೀತಿಗಳನ್ನೂ ತಿಳಿಸಿದ್ದಾರೆ. ದಪ್ಪಗಿರುವವರೆಲ್ಲ ರೋಗಿಗಳಲ್ಲ ಎಂದು ನಿರೂಪಿಸಿ, ಬೊಜ್ಜಿನಿಂದ ಬರುವ ಕಾಯಿಲೆಗಳು, ಅವುಗಳಿಗೆ ಪರಿಹಾರ ಮತ್ತು ದೇಹ ಹಗುರಾಗಿಸುವ ಉಪಾಯಗಳನ್ನು ವಿವರಿಸಿದ್ದಾರೆ. ಇದು ಮುಂದಿನ ಭಾಗವಾದ 'ನಮ್ಮ ಅಡುಗೆ ಮನೆ' ಗೆ ಒಳ್ಳೆಯ ಪ್ರವೇಶವನ್ನು ಒದಗಿಸಿದೆ.

**ನಮ್ಮ ಅಡುಗೆ ಮನೆ:** ಇಲ್ಲಿ ಅಡುಗೆಗೆ ಬಳಸಬೇಕಾದ ವಸ್ತುಗಳು, ತಯಾರಿಯ ಬಗೆಗೆ ಕಿವಿಮಾತುಗಳನ್ನು ಹೇಳಲಾಗಿದೆ. ಹಾಗೆಯೇ ಇದರಲ್ಲಿ ಬಗೆಬಗೆಯ ದೋಸೆಗಳು, ತಿಂಡಿಗಳು, ಗಂಜಿಗಳು, ಚಟ್ನಿಗಳು, ಅನ್ನಗಳು, ತಂಬುಳಿಗಳು, ಸಾರು ಸಾಂಬಾರುಗಳು, ಮಜ್ಜಿಗೆಹುಳಿ, ಪಲ್ಯಗಳು, ಬಜ್ಜಿಗಳು, ಸಾಯಂಕಾಲದ ತಿಂಡಿಗಳು, ಉತ್ತರಭಾರತದ ಅಡುಗೆಗಳು, ಪಾಯಸ–ಪಾನಕ ಸಮೇತ ಸಿಹಿತಿಂಡಿಗಳನ್ನು ಮಾಡುವ ವಿಧಾನಗಳನ್ನು ತಿಳಿಸಿದ್ದಾರೆ. ಲೇಖಕರು ಈ ೬೮ ಅಡುಗೆಗಳಿಗೆ ಉತ್ಸಾಹದಿಂದ ಇನ್ನಷ್ಟು ಪಾಕವಿಧಾನಗಳನ್ನು ಸೇರಿಸುತ್ತಲೇ ಇರುವುದರಿಂದ ಅವನ್ನು ತಿಳಿಯಲು ತಮ್ಮ ಅಂತರ್ಜಾಲ ಸಂಪರ್ಕವನ್ನೂ ನೀಡಿದ್ದಾರೆ!

ಒಟ್ಟಿನಲ್ಲಿ ಈ ಪುಸ್ತಕ ಸಂಗ್ರಹಯೋಗ್ಯ. ರೋಗಿಗಳ ಸಮಸ್ಯೆಗಳ ಬಗೆಗಿನ ಕೇಸ್–ಸ್ಟಡಿಗಳು ಹೆಚ್ಚು ಇಲ್ಲದಿರುವುದು ಒಂದು ಕೊರತೆ. ಇಂತಹ ಕೇಸ್‌ಸ್ಟಡಿಗಳು ಓದುಗರ ಕುತೂಹಲ ಹೆಚ್ಚಿಸಲು, ತಿಳಿಸುವ ವಿಚಾರಗಳ ಬಗ್ಗೆ ನಂಬಿಕೆ ಮೂಡಿ ಅಳವಡಿಸಿಕೊಳ್ಳುವ ಬಗ್ಗೆ ಯೋಚಿಸಲು ನೆರವಾಗುತ್ತವೆ. ಓದುಗರು ಇದಕ್ಕೆ ಪೂರಕವಾಗಿ ಪಳ್ಳತ್ತಡ್ಕ ಕೇಶವ ಭಟ್ಟರ ಸಂಸ್ಮರಣ ಗ್ರಂಥವಾದ **'ಸುರುಳಿ'** ಯನ್ನೂ ಓದಿದರೆ, ಆಹಾರವೇ ಔಷಧಿಯಾಗುವ ಹಲವು ಪ್ರಸಂಗಗಳನ್ನು ಅಧ್ಯಯನ ಮಾಡಬಹುದು.

*– ಡಾ. ಎಚ್. ಪಾಂಡುರಂಗ ವಿಠಲ*

# ಹರಿಕ್ಷೇತ್ರದಿಂದ ಹರಕ್ಷೇತ್ರಕ್ಕೆ

**ಸ್ವಾಮಿ ಕರುಣಾಕರಾನಂದ**

*(ಹಿಂದಿನ ಸಂಚಿಕೆಯಿಂದ)*

*(ಲೇಖಕ ಸ್ವಾಮೀಜಿಯವರು ಮಣಿಮಹೇಶಕ್ಕೆ ನಡೆದು ಕೊಂಡು ಹೋಗುತ್ತಿದ್ದಾರೆ. ಅವರ ಜೊತೆಗೆ ಒಬ್ಬ ಮಾರ್ಗದರ್ಶಿ ಕೂಡ ಇದ್ದನು. ಅವರು ಧಾಂಚೋ ಎಂಬ ಸ್ಥಳಕ್ಕೆ ಬಂದಿದ್ದಾರೆ. ಅದೇ ಅವರ ಆ ದಿನದ ವಿಶ್ರಾಂತಿಸ್ಥಾನ.)*

**ಧಾಂ**ಚೋದಲ್ಲಿ ನಮಗೆ ಟ್ರೆಕ್ಕಿಂಗ್ ಕಂಪೆನಿಯವರ ಒಂದು ಬಂಕರ್ ಸಜ್ಜಾಗಿತ್ತು! ಮಧ್ಯಾಹ್ನ ೩.೩೦ ಗಂಟೆಗೇ ಅಲ್ಲಿ ಬಂದು ತಲುಪಿದ್ದೆವು. "ಸ್ವಾಮೀಜಿ ನೀವು ವೇಗವಾಗಿಯೇ ನಡೆದಿದ್ದೀರಿ" ಎಂದು ನಮ್ಮ ಮಾರ್ಗದರ್ಶಿ ನನಗೆ ಉತ್ತೇಜನವನ್ನು ನೀಡಿದ. ಅಲ್ಲಿ ಮೂವರು ನಮಗೆ ಅಡುಗೆಯನ್ನು ಸಿದ್ಧಪಡಿಸಿದ್ದರು. ಊಟ ಮಾಡಿ ಒಂದು ಗಂಟೆ ಮಲಗಿ ನಿದ್ರಿಸಿದ ಮೇಲೆ, ಸುಮಾರು ಐದು ಗಂಟೆಗೆ ಅಲ್ಲೇ ಅಡ್ಡಾಡಿ ಬಂದೆವು. ಆಗ ನನಗೆ ದೂರದಲ್ಲಿ, ಹಿಮದಿಂದ ಕೂಡಿದ ಬೆಟ್ಟದಲ್ಲಿ 'ಓಂಕಾರ' ಆಕಾರದ ಹಿಮ ಕಂಡುಬಂತು. ಅದನ್ನು ಕ್ಯಾಮರಾದಲ್ಲಿ ಸೆರೆ ಹಿಡಿದೆ. ಭಸ್ಮಾಸುರನಿಗೆ ಶಿವ ವರವನ್ನು ಕೊಟ್ಟ. ಆಗ ಆತ ಶಿವನ



ಧಾಂಚೋದಿಂದ ಕಂಡುಬಂದ ಒಂದು ದೃಶ್ಯ

ಮೇಲೆಯೇ ಅದನ್ನು ಪರೀಕ್ಷಿಸಲು ಬಂದ. ಆಗ ಶಿವ ಅಲ್ಲಿರುವ ಜಲಪಾತದ ಒಳಗಿರುವ ಗುಹೆಯಲ್ಲಿ ಹೋಗಿ ಸೇರಿಕೊಂಡನಂತೆ. ಶಿವನನ್ನು ಕಾಣದೆ ಭಸ್ಮಾಸುರನು ಹುಡುಕುತ್ತಿರಲು ಮೋಹಿನಿ ವೇಷವನ್ನು ಧರಿಸಿ ಬಂದ ವಿಷ್ಣುವು, ಭಸ್ಮಾಸುರನನ್ನು ಭಸ್ಮವನ್ನಾಗಿ ಮಾಡಿದನಂತೆ. ಆದ್ದರಿಂದ ಆ ಸ್ಥಳಕ್ಕೆ 'ಧಾಂಚೋ' ಎಂದು ಹೆಸರು. ಅಲ್ಲಿಯೇ ನಮ್ಮಿಬ್ಬರ ಗುಂಪಿಗೆ ಮೂರನೆಯವನಾಗಿ ಒಬ್ಬ ರಕ್ಷಕ ಸೇರಿಕೊಂಡ. ಹಿಮದ ಮೇಲೆ ನಡೆಯುವಾಗ ಕಾಲಿಡಲು ಅನುಕೂಲವಾಗುವಂತೆ ಮುಂದೆ ಕೊಡಲಿಯಿಂದ ಕೆತ್ತಿಕೊಂಡು ಹೋಗುವ ಕೆಲಸ ಅವನದ್ದು. ಹೆಸರು ಕೇಳಿದಾಗ 'ಲಕ್ಕಿ' ಎಂದ. ಮಾರನೇ ದಿನ ಆಕಾಶ ಸ್ವಚ್ಛವಾಗಿದ್ದರೆ, ಬೆಳಗ್ಗೆ ಐದು ಗಂಟೆಗೇ ಹೊರಡೋಣವೆಂದು ಯೋಜಿಸಿಕೊಂಡು ಮಲಗಿಕೊಂಡೆವು. ಅದೇ ದಿವಸ ಸುಮಾರು ಹತ್ತು ಜನರ ಇನ್ನೊಂದು ಗುಂಪೂ ನಾವು ಉಳಿದಿದ್ದ ಬಂಕರ್‌ಗೇ ಬಂದು ವಿಶ್ರಾಂತಿ ತೆಗೆದುಕೊಂಡಿತು.

ಬೆಳಿಗ್ಗೆ ಶಿವನ ಪರೀಕ್ಷೆ ಕಾದಿತ್ತು! ಹಿಂದಿನ ದಿನ ಸುಂದರ ವಾಗಿದ್ದ ಆಕಾಶ, ಮಾರನೇ ದಿನ ಕರಾಳವಾಯಿತು. ಚಿಟಿಪಿಟಿ ಮಳೆ. ಈಗ ಬಿಟ್ಟೀತು, ಇನ್ನೊಂದು ಗಂಟೆ ಆದ ಮೇಲೆ ಬಿಟ್ಟೀತು ಎಂದು ಕಾಯುತ್ತಿದ್ದೆವು. ಬೆಳಿಗ್ಗೆ ೧೧.೦೦ ಗಂಟೆಗೆ ಮೋಡಗಳು ಚದುರಿಹೋಗಿ ಸ್ವಲ್ಪ ಅವಕಾಶ ಮಾಡಿಕೊಟ್ಟಿತು. ಸುಮಾರು ಮುಕ್ಕಾಲು ಗಂಟೆಯಲ್ಲಿ ಬಾಂದರ್ ಘಾಟಿಯನ್ನು ದಾಟಿ 'ಕಾಲಿ ಫ್ರಾಟ್' ಎನ್ನುವ ಜಾಗಕ್ಕೆ ಹೋದೆವು. ಪುನಃ ಮೋಡಗಳು ಕೆಳಗಿನಿಂದ ಮೇಲ್ಮುಖವಾಗಿ ಬರತೊಡಗಿದವು. ಧಾರಾಕಾರವಾಗಿ ಮಳೆ ಶುರುವಾಯಿತು. "ಭಗವಂತನದು ಇದೆಂತಹ ಪರೀಕ್ಷೆಯಪ್ಪ!" ಎಂದುಕೊಂಡೆ. ಏಕೆಂದರೆ ನಮ್ಮ ಮಾರ್ಗದರ್ಶಿಯ ಪ್ರಕಾರ, ಮೇಲೆ ಬಹಳ ಮಳೆ ಯಾದರೆ ಹಿಮಪಾತ ಜೋರಾಗಿ ಆಗುತ್ತದೆ. ಹಾಗೆಯೇ, ಬೆಟ್ಟಕುಸಿತವೂ ಆಗುವುದು. ಇದರಿಂದ ನಮ್ಮ ರಸ್ತೆಯೇ ಮುಚ್ಚಿಹೋಗುವ ಸಂಭವವಿತ್ತು! ಹಿಮಾಲಯದ ಇಂತಹ ಪರ್ವತಪ್ರದೇಶಗಳನ್ನು ಏರುವಾಗ ಮಳೆಯನ್ನು ನಿರೀಕ್ಷಿಸಿ ರೈನ್‌ಕೋಟನ್ನು ತೆಗೆದುಕೊಂಡು ಹೋಗಲೇಬೇಕು. ನಾನು ಹಾಕಿಕೊಂಡಿದ್ದ ವಿಂಡ್‌ಚೀಟರ್ ನನಗೆ ಮಳೆಯಿಂದ ರಕ್ಷಣೆ ನೀಡಿತು.

ಅಲ್ಲೇ ಪಕ್ಕದಲ್ಲಿ ಇಬ್ಬರು ಸಾಧುಗಳು ಟೆಂಟೊಂದರಲ್ಲಿ ಕುಳಿತಿದ್ದರು. ನಾವು ಅವರ ಟೆಂಟ್ ಒಳಗೆ ಹೋದೆವು. ಮಳೆಯಿಂದ ರಕ್ಷಣೆ ಪಡೆಯಲು ನಮ್ಮ ಮಂಡಿಗಳನ್ನು ನಮ್ಮ ಗಲ್ಲಕ್ಕೆ ಒತ್ತುತ್ತ ಕುಳಿತೆವು. "ಚಹಾ ಪೀಯೇಂಗೆ?" (ಚಹಾ ಸೇವಿಸುವಿರೇನು?) ಎಂದು ಅವರಲ್ಲೊಬ್ಬ ಸಾಧು ಕೇಳಿದರು. "ಹಾ, ಜ಼ರೂರ್" ಎಂದೆ. "ದೂಧ್ವಾಲಿ, ನಾ ಲಿಂಬೂ ಚಾ?" ಎಂದು ಪ್ರಶ್ನಿಸಿದರು. "ಲಿಂಬೂವಾಲಿ" ಎಂದೆವು. ಅವರು ತಯಾರಿಸಿಕೊಟ್ಟ ನಿಂಬೆರಸದ ಚಹಾ ಸೇವಿಸುತ್ತ ಆ ಜಾಗದ ಮಹಿಮೆಯನ್ನು ಕೇಳತೊಡಗಿದೆವು. "ಇಲ್ಲಿ ಬೆಟ್ಟಕ್ಕೆ ನಮ್ಮ

ಕಿವಿಯನ್ನು ಕೊಟ್ಟು ಆಲಿಸಿದರೆ ಹಿಟ್ಟುಬೀಸುವ ಕಲ್ಲಿನ ಶಬ್ದವು ಕೇಳಿಬರುತ್ತದೆ. ತಾಯಿಯು ಶಿವನಿಗೆ ಇಲ್ಲೇ ಹಿಟ್ಟು ಬೀಸಿ ಕಳಿಸಿ ಕೊಡುತ್ತಾಳೆ" ಎಂದರು ಒಬ್ಬ ಸಾಧು. ನಮ್ಮ ಮಾರ್ಗದರ್ಶಿ ಕಿವಿಗೊಟ್ಟು ಆಲಿಸಿ "ಅದು ಕೆಳಗೆ ಹರಿಯುವ ನದಿಯ ಶಬ್ದದ ಪ್ರತಿಧ್ವನಿ ಇರಬಹುದು" ಎಂದನು. ಆದರೆ, ನನಗಂತೂ ಯಾವ ಶಬ್ದವೂ ಕೇಳಿಬರಲಿಲ್ಲ! ಹಿಮಾಚಲ ಭಾಷೆಯಲ್ಲಿ 'ಘ್ರಾಟ್' ಎಂದರೆ ಬೀಸುವ ಕಲ್ಲು. ಸುಮಾರು ಅರ್ಧ ಗಂಟೆ ಅಲ್ಲಿ ಕಳೆದ ನಂತರ, ಇದ್ದಕ್ಕಿದ್ದಂತೆ ಮೋಡಗಳು ಚದುರಿ ಸೂರ್ಯನು ಪ್ರಸನ್ನನಾಗಿ ತನ್ನ ಕೈಚಾಚಿದ ಕರಗಳಿಂದ ಮುಂದಿನ ಪ್ರಯಾಣಕ್ಕೆ ಆಹ್ವಾನ ನೀಡಿದ. ಆ ಸಾಧುಗಳಿಗೆ ಅಭಿನಂದನೆಗಳನ್ನು ಸಲ್ಲಿಸುತ್ತ ಮರು ಉತ್ಸಾಹದಿಂದ ಏರುತ್ತ ಹೋದೆವು. ವ್ಹಾ! ಅದೆಂತಹ ಪ್ರಕೃತಿ! ಅದ್ಭುತ! ಇಲ್ಲಿಂದ ದೇವದಾರುವಿನ ಸಾಲುಗಳು ಮುಗಿದು, ಭೂರ್ಜಮರದ ತೆಳುವಾದ ಸಾಲುಗಳು ಕಂಡವು. ಅಲ್ಲಲ್ಲಿ ಎರಡೂ ಪಕ್ಕ ಕುರುಚಲು ಗಿಡಗಳು ಕಾಣಿಸಿಕೊಂಡವು. ಇನ್ನೂ ಎತ್ತರ ಹೋಗುತ್ತಿದ್ದಂತೆ ಎತ್ತೆತ್ತಲೂ ಹಿಮವೇ ಕಾಣಲು ಶುರುವಾಯಿತು. ಶ್ವಾಸಕೋಶಗಳಿಗೆ ಆಮ್ಲಜನಕ ಕಡಿಮೆ ಯಾಗುತ್ತಿದ್ದುದು ಅರಿವಿಗೆ ಬಂತು. ಅಲ್ಲೊಂದು ಕಡೆ ಕಪ್ಪು ಬೆಟ್ಟದ ಕುತ್ತಿಗೆಯಷ್ಟನ್ನು ಮಾತ್ರ ಬುಡದಿಂದ ಅಪ್ಪಿಕೊಂಡಿದ್ದ ಹಿಮದ ರಾಶಿಯನ್ನು ಕಂಡೆ. ಅದರ ಮೇಲೆ ಬಿಳಿಮೋಡಗಳು ತಮ್ಮ ಕರಿನೆರಳನ್ನು ಹರಡಿದ್ದವು. ಶಿವನ ಕಂಠವನ್ನು ಅಪ್ಪಿಕೊಂಡಿದ್ದ ಪಾರ್ವತಿಯನ್ನು ಕಂಡು, ಅಸೂಯೆಯಿಂದ ಮೋಡದ ರೂಪದಲ್ಲಿದ್ದ ಸವತಿಯಾದ ಬಿಳಿಗಂಗೆಯು ಅವಳನ್ನು ಕಪ್ಪಾಗಿಸಬೇಕೆಂಬ ಹಠದಿಂದ, ನೆರಳನ್ನು ಸೃಷ್ಟಿಸಿ ದ್ದಂತೆ ಕಾಣಿಸುತ್ತಿತ್ತು. ಸ್ವಲ್ಪ ಹೊತ್ತಿನಲ್ಲಿ, ತನ್ನ ಈ ಆಟಕ್ಕೆ ಪಾರ್ವತಿಯು ಬಗ್ಗುವುದಿಲ್ಲವೆಂದು, ಮಳೆ ಸುರಿಸಿ ಆಕೆಯ ಹಿಡಿತವನ್ನು ಬಿಡಿಸಬೇಕೆಂದು ಪ್ರಯತ್ನಿಸುತ್ತಿದ್ದ ಮೇಘ ರೂಪಿ ಗಂಗೆಯನ್ನು ಓಡಿಸಲು, ಗಿರಿಜೆಯು ಮರುತನ (ವಾಯು) ಸಹಾಯವನ್ನು ಪಡೆದುದನ್ನು ನನ್ನಲ್ಲಿದ್ದ ಮೂಕ ಕವಿ ಕಂಡಿದ್ದ!

ಬರಬರುತ್ತ ಯಾತ್ರೆ ತ್ರಾಸದಾಯಕವಾಯಿತು. ಸುಂದರಾಶಿ ಎಂಬ ಜಾಗಕ್ಕೆ ಮಧ್ಯಾಹ್ನ ೨.೦೦ ಗಂಟೆಗೆ ಬಂದು ತಲುಪಿದೆವು. "ಸ್ವಾಮೀಜಿ, ನಾವೀಗಲೇ ಬೆಳಗಿನ ಮಳೆಯ ದೆಸೆಯಿಂದ ಆರು ಗಂಟೆ ತಡವಾಗಿದ್ದೇವೆ. ಬೇಗ ಬೇಗ ಹೆಜ್ಜೆ ಹಾಕದೆ ಹೋದರೆ, ಮೇಲೆ ಸಿಕ್ಕಿಹಾಕಿಕೊಳ್ಳಬೇಕಾಗುತ್ತದೆ. ಬೇಗ ಈ ಪರೋಟಾಗಳನ್ನು ತಿನ್ನಿರಿ. ಹೊರಡೋಣ" ಎಂದನು ನಮ್ಮ ಮಾರ್ಗದರ್ಶಿ. ಇದಾದ ಮೇಲೆ ಮುಂದೆ ನೋಡಿದರೆ, ನಡುಕ ಶುರುವಾಯಿತು! ಇನ್ನು ಹೆಚ್ಚಿನ ದಾರಿ ಹಿಮಗಲ್ಲುಗಳ ಮೇಲೆ ನಡೆಯುವುದಾಗಿತ್ತು! ನಮ್ಮ ಮುಂದೆ 'ಲಕ್ಕಿ' ತನ್ನ ಹಿಮಗತ್ತಿಯಿಂದ ಹಿಮವನ್ನು ಕೆತ್ತುತ್ತಾ ಕಾಲಿಡಲು ಜಾಗ ಮಾಡುತ್ತಿದ್ದನು. ಭಗವಂತ ನೆನಪಾದ! "ಇದರ ಮೇಲೆ ಈಗ ನಡೆಯಬೇಕೇನು?" ಎಂದು ನಾನು ಕೇಳಿದೆ. "ಹೌದು" ಎಂದ ನನ್ನ ಮಾರ್ಗದರ್ಶಿ. ಸರಿ. ನನ್ನ ಪಕ್ಕದಲ್ಲಿ ಅವನು ನನ್ನ ಕೈಯನ್ನು ಹಿಡಿದುಕೊಂಡಿದ್ದ. ನಾನು ಹಿಮದ ಮೇಲೆ ಕಾಲಿಟ್ಟೆ. ನನಗೆ ಹಿಡಿತವೇ ಸಿಗುತ್ತಿಲ್ಲ! ಕೆಳಕೆಳಗೆ ಜಾರುತ್ತಿದೆ. ಇಲ್ಲಿಂದ ಬಿದ್ದರೆ, ಕೆಳಗೆ ಹರಿಯುತ್ತಿರುವ ನದಿಗೆ ಜಾರಿ ಬಿದ್ದುಬಿಡಬೇಕಾಗುತ್ತದೆ. ಅವನು ನನ್ನ ಕೈ ಬಿಟ್ಟುಬಿಟ್ಟರೆ ಏನಾಗಬಹುದೆಂದು ನನಗೆ ಅಂದಾಜು ಸಿಕ್ಕಿತು! ಹೀಗಾಗಿ ನಾನೇ ನನ್ನ ಮಾರ್ಗದರ್ಶಿಯ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡೆ! ಆದರೆ, ಬೆವರು ಕಿತ್ತು ಹರಿಯುತ್ತಿದ್ದ ನನ್ನ ಕೈ ಜಾರುತ್ತಿತ್ತು! "ಹಾಗೆ ಹಿಡಿಯಬೇಡಿ. ನನ್ನ ಕೈ ನೋಯುತ್ತದೆ. ಹಿಮದ ಮೇಲೆ ಹೀಗೆ ಕಾಲಿಡಬೇಕು" ಎಂದು ತೋರಿಸಿದ ನನ್ನ ಮಾರ್ಗದರ್ಶಿ. ಎಲ್ಲಿ ಹಿಮವನ್ನು ಕೊಚ್ಚಿ ಜಾಗ ಮಾಡಲಾಗಿತ್ತೋ, ಅಲ್ಲಿ ಮೊದಲು ಹಿಮ್ಮಡಿಯನ್ನು ಇಟ್ಟು, ನಂತರ ಉಳಿದ ಪಾದವನ್ನು ಇಡಬೇಕೆಂದು ತೋರಿಸಿಕೊಟ್ಟ. ಸಾಮಾನ್ಯ ನೆಲದ ಮೇಲೆ ನಡೆದಂತೆ ವಿಶ್ವಾಸದಿಂದ ಹೆಜ್ಜೆ ಇಡುವಂತೆ ಹೇಳಿದ. ಆದರೂ, ಈ ಉಪಾಯವನ್ನು ಕಲಿಯಬೇಕಾದರೆ ಮೊದಲು ನನ್ನ 'ಹಿಮದ ಮೇಲೆ ನಡೆಯುವ ಹೆದರಿಕೆ'ಯನ್ನು ಹೇಗಾದರೂ ಮಾಡಿ ತ್ಯಜಿಸಬೇಕಾಗಿತ್ತು! ಆದರೆ, ನಾನು ಹೆದರಿಕೆಯನ್ನು ಬಿಟ್ಟರೂ ಅದು ನನ್ನನ್ನು ಬಿಟ್ಟಂತೆ ಕಾಣಲಿಲ್ಲ! ಭೈರೋ ಘಾಟಿ ಎಂಬಲ್ಲಿ, ಇದೇ ರೀತಿಯ ಇನ್ನೊಂದು ಸಾಹಸ ಮಾಡಬೇಕಾಯಿತು. ಅಲ್ಲಂತೂ ೮೦ ಡಿಗ್ರಿ ಕೋನದಲ್ಲಿ ಏರುತ್ತಿದ್ದ ಹಿಮಗಲ್ಲಿನ ಮೇಲೆ


ಇಳಿಜಾರಿನಲ್ಲಿ ಪ್ರಯಾಸದ ನಡಿಗೆ

ನಡೆತ! ಆಗ ಶುರುವಾಯಿತು ನನ್ನ ಹೃದಯದ ಮಹಾ ಬಡಿತ! ಕೈಗಳಲ್ಲಿ ಬೆವರಿನ ಸುರಿತ! ನಾನು ನನ್ನನ್ನೇ ಮೊದಲು ಇಲ್ಲಿ ಗೆಲ್ಲಬೇಕಾಗಿತ್ತು, ಹಿಮದ ಮೇಲೆ ಕಾಲಿಡಲು! ಕೈಯಲ್ಲಿ ಚೂಪಾದ ಕೋಲು ಇದ್ದರೂ ನನಗೆ ನನ್ನಲ್ಲೇ ವಿಶ್ವಾಸ ಸಾಲದ್ದರಿಂದ ಇನ್ನು ಆ ಕೋಲಿನ ಮೇಲೆ ಹೇಗೆ ತಾನೇ ವಿಶ್ವಾಸ ಹುಟ್ಟೀತು?! ನಮ್ಮ ಮಾರ್ಗದರ್ಶಿ ಎಷ್ಟು ಧೈರ್ಯ ತುಂಬುತ್ತಿದ್ದರೂ ಸಾಕಾಗಲಿಲ್ಲ! ಕೊನೆಗೂ ಹೇಗೋ ಮಾಡಿ ಹತ್ತಿದೆ! (ಈಗಲೂ ಅದನ್ನು ನೆನಸಿಕೊಂಡರೆ ಮೈ ಜುಂ ಎನಿಸುತ್ತದೆ!) ಅಲ್ಲಿಂದ ಇಡೀ ದೃಶ್ಯವೇ ಬದಲಾಗುತ್ತದೆ. ನಾವು ನಿಜವಾಗಿಯೂ ಬೇರೆಯದೇ ಲೋಕದಲ್ಲಿರುವಂತೆ ಕಾಣಿಸುತ್ತದೆ. ಎಲ್ಲಿ ನೋಡಿದರೂ ಹಿಮ. ಅಲ್ಲಲ್ಲಿ ಕಪ್ಪು ಬೆಟ್ಟಗಳ ಇಣುಕುವಿಕೆ. ಮೌನವೇ ಹೆಪ್ಪುಗಟ್ಟಿತ್ತು ಅಲ್ಲಿ! ಹಿಮದ ಮೇಲೆ ನಡೆದು ಮೊದಲು ಗೌರಿಕುಂಡವನ್ನು

ತಲುಪಿದೆವು. ವ್ಹಾ! ಇಲ್ಲಿಂದಲೇ ಮಣಿಮಹೇಶನ ಅದ್ಭುತ ದೃಶ್ಯ. ಅಪ್ರಯತ್ನವಾಗಿ ಕಣ್ಣಲ್ಲಿ ನೀರು ಬಂತು, ಅವನನ್ನು ಕಂಡಾಗ! ಗೌರಿಕುಂಡದಲ್ಲಿ ಸ್ನಾನ ಮಾಡಬಹುದೇ ಎಂದು ನೀರು ಮುಟ್ಟಿ ನೋಡಿದೆ. ನೀರು ಹೆಪ್ಪುಗಟ್ಟದೆ ಇದ್ದರೂ 'ತಣ್ಣಗಿನ ಶಾಕ್' ಪಡೆದ ಮೇಲೆ ಈ ಸಾಹಸ ಬೇಡವೆನಿಸಿತು. ಪ್ರೋಕ್ಷಣೆ ಮಾಡಿಕೊಂಡು ಬಾಟಲ್‌ನಲ್ಲಿ ತುಂಬಿಸಿಕೊಂಡೆ. ಇನ್ನೂ ಎರಡು ಫರ್ಲಾಂಗು ಹಿಮದ ಮೇಲೆ ನಡೆದು ಮಣಿಮಹೇಶ ಸರೋವರಕ್ಕೆ ಹೋಗಬೇಕಿತ್ತು; ಅದೂ ಕೂಡ ೬೦ ಡಿಗ್ರಿ ಕೋನದಲ್ಲಿ ಹಿಮದ ಮೇಲೆ ಏರುತ್ತಲೇ ಹೋಗಬೇಕು. ಅಲ್ಲೊಬ್ಬರು ನೇಪಾಳಿ ಸಾಧುಗಳು ಕಳೆದ ನಾಲ್ಕು ವರ್ಷಗಳಿಂದ ಒಂದು ಬಂಕರ್ ಮಾಡಿಕೊಂಡು ವಾಸಿಸುತ್ತಿದ್ದಾರೆ. ನಾವು ಹೋಗಿ ಅವರನ್ನು ಮಾತನಾಡಿಸಿ, ಪ್ರಸಾದ ಪಡೆದೆವು. ಅವರು ಕಾಫಿ ಮಾಡಿಕೊಟ್ಟರು. ಸ್ವಲ್ಪ ಹೊತ್ತು ಸುಧಾರಿಸಿಕೊಂಡು, "ಮಣಿಮಹೇಶ ಸರೋವರ ಎಲ್ಲಿದೆ ಇಲ್ಲಿ?" ಎಂದು ಮಾರ್ಗ ದರ್ಶಿಯನ್ನು ಪ್ರಶ್ನಿಸಿದೆ. "ನೀವು ನಿಂತಿರುವಲ್ಲಿಯೇ" ಎಂಬ


ಮಣಿಮಹೇಶದಿಂದ ಕಾಣಬರುವ ರೋಮಾಂಚಕ ದೃಶ್ಯ

ಉತ್ತರ ಬಂತು! ಮಧ್ಯೆ ತ್ರಿಶೂಲಗಳನ್ನು ಹುಗಿದಿದ್ದರು. ಅದು ತಳದಿಂದ ೨೫ ಅಡಿ ಎತ್ತರವಿತ್ತು. ಅಲ್ಲೇ ತೀರದಲ್ಲಿ ಅಮೃತ ಶಿಲೆಯ ಶಿವಮೂರ್ತಿ 'ಚೌಮುಖ'ವಿತ್ತು. ಅದಕ್ಕೆ ಪೂಜೆ ಸಲ್ಲಿಸಿ, ಅಲ್ಲಲ್ಲಿ ಕಣ್ಣಿಗೆ ಕಂಡ ಸರೋವರದ ನೀರನ್ನು ಬಾಟಲ್‌ಗೆ ಹಾಕಿಕೊಂಡು ಕೆಳಗೆ ಇಳಿಯಲು ಶುರು ಮಾಡಿದೆವು. ಇನ್ನೇನು ಮಣಿಮಹೇಶನ ಸನ್ನಿಧಿಯಿಂದ ಕೆಳಗಿಳಿಯುವಾಗ, ಮೇಲಿನಿಂದ ನಮ್ಮ ಮೈಮೇಲೆ ಹತ್ತಿಯಂತೆ ಹಿಮದ ವೃಷ್ಟಿ ಬಿತ್ತು, ಆಶೀರ್ವಾದದಂತೆ. ಆ ಹಿಮದ ಹನಿಗಳು ನಮ್ಮ ಮೈಮೇಲೆ ಬಿದ್ದಂತೆ ಕರಗಿ ಹೋಗುತ್ತಿದ್ದವು. ಕೆಳಗೆ ಭೈರೋ ಘಾಟಿಯಲ್ಲಿ ಇಳಿಯುವಾಗ ನನ್ನ ಕಾಲು ಇದ್ದಕ್ಕಿದ್ದಂತೆ ಸರ್ರನೆ ಜಾರತೊಡಗಿತು. ಮೂರು ಅಡಿ ಕೆಳಗೆ ಜಾರಿದೆ. ತಕ್ಷಣ ನನ್ನ ಕೈಯಲ್ಲಿದ್ದ ಕೋಲನ್ನು ಆಸರೆಯಾಗಿ ಚುಚ್ಚಿದೆ. ಇನ್ನೊಂದು ಕಾಲು ಮಂಜಿನಲ್ಲಿ ಎರಡಡಿ ಹೂತುಕೊಂಡಿತು. ತಕ್ಷಣ ನಮ್ಮ ರಕ್ಷಕ ನನ್ನನ್ನು ಹಿಡಿದುಕೊಂಡು ಸ್ವಲ್ಪ ಹತ್ತಿರದಲ್ಲಿದ್ದ ಬಂಡೆಗೆ ಒರಗಿಸಿ, ನನ್ನ ಕಾಲುಗಳನ್ನು ಹಿಮದಿಂದ ಬಿಡಿಸಿ, ಕಲ್ಲಿನ ಮೇಲೆ ಕೂಡಿಸಿದ. ಮುಂದೆ ನೋಡಿದರೆ, ನಾವು ಹಿಂದೆ ಬಂದಿದ್ದ ಹಿಮದ ದಾರಿಯ ಮೇಲೆ ಮೇಲಿನಿಂದ ದೊಡ್ಡ-ಸಣ್ಣ ಕಲ್ಲುಗಳು ಉರುಳಿಕೊಂಡು ಬರುತ್ತಿದ್ದವು. ಸ್ವಲ್ಪ ಹೊತ್ತು ನಾವು ಇರುವಲ್ಲೇ ಇದ್ದು, ಕಲ್ಲುಗಳು ಬೀಳುವುದು ನಿಂತಮೇಲೆ ಹಿಮದ ಮೇಲೆ ನಡೆಯುತ್ತ ಸಾಯಂಕಾಲ ೬.೩೦ ಕ್ಕೆ ಧಾಂಚೋಗೆ ವಾಪಾಸು ಬಂದೆವು. ಹಿಂದಿನ ದಿನ ಬಂದಿದ್ದ ಹತ್ತು ಜನ ಇನ್ನೂ ಹೋಗುವುದೋ, ಬೇಡವೋ ಎಂದು ಯೋಚಿಸುತ್ತಿದ್ದರು. ನಾವು ಅಲ್ಲಿಗೆ ಹಿಂತಿರುಗಿದ ನಂತರ ಎಲ್ಲರೂ ಚಪ್ಪಾಳೆ ತಟ್ಟಿ ಸ್ವಾಗತಿಸಿದರು. ಕೊನೆಗೂ ಅವರು ಮಣಿಮಹೇಶಕ್ಕೆ ಹೋಗುವ ಸಾಹಸ ಮಾಡಲೇ ಇಲ್ಲ. ನಾವು ಆ ದಿನ ಧಾಂಚೋವಿನಲ್ಲೇ ಉಳಿದು ಮಾರನೇ ದಿನ ಅಲ್ಲಿಂದ ಇಳಿದುಬಂದೆವು. ಮಾರನೇ ದಿನದಿಂದ ಪುನಃ ಧಾರಾಕಾರವಾಗಿ ಮಳೆ ಶುರುವಾಯಿತು. ಬಹುಶಃ ನಮಗೆ ಆ ದಿವಸ ದರ್ಶನ ಮಾಡಲೆಂದೇ ಪ್ರಕೃತಿ ಬಿಟ್ಟುಕೊಟ್ಟಿತ್ತೋ ಎಂದುಕೊಂಡೆ. ಮೇ ೨೭ ಸೋಮವಾರ ಮಣಿಮಹೇಶದ ದರ್ಶನ ಮಾಡಿ ಕೊನೆಗೆ ೨೮ರ ಬೆಳಿಗ್ಗೆ ಭರ್‌ಮೌರ್‌ಗೆ ಬಂದೆವು. ೨೯ರ ಬೆಳಿಗ್ಗೆ ಚಂಬಾಗೆ ಬಂದು ಅಲ್ಲಿಂದ ೩೦ಕ್ಕೆ ದೆಹಲಿಗೆ ಬಂದೆನು.

**ಯಾತ್ರೆಯಿಂದ ಕಲಿತ ಆಧ್ಯಾತ್ಮಿಕ ಪಾಠ:** ಪರ್ವತಗಳನ್ನು ರಸ್ತೆಯ ಮೂಲಕ ದಾಟುವಾಗ ಏರುವುದೂ ಇಳಿಯುವುದೂ ಇದ್ದೇ ಇರುತ್ತವೆ. ಹಾಗೆಯೇ ಆಧ್ಯಾತ್ಮಿಕ ಜೀವನದ ಪ್ರತಿಯೊಂದು ಏರುವಿಕೆ, ಇಳಿಯುವಿಕೆ – ಈ ಎರಡೂ ಮುಂದಿನ ಹಂತಕ್ಕೆ ನಾವು ಹೋಗುವ ದಾರಿಯಾಗಿ ಪರಿಣಮಿಸುತ್ತದೆ. ಹಿಮದ ಮೇಲೆ ಕಾಲಿಡುವಾಗ ಕೆಳಗೆ ಪ್ರಪಾತವಿದೆಯೋ, ನೆಲವಿದೆಯೊ ಎಂಬುದರ ಜ್ಞಾನ ಇಲ್ಲದ್ದರಿಂದ ಭಯವಾಗುತ್ತಿತ್ತು; ಮಾರ್ಗದರ್ಶಿಯ ಸಹಾಯ ಅತ್ಯಗತ್ಯವೆನಿಸಿತು. ಹಾಗೆಯೇ ನಿಗೂಢವಾದ ಆಧ್ಯಾತ್ಮಿಕ ಜೀವನ ಮಾರ್ಗದಲ್ಲಿಯೂ ಒಬ್ಬ ಮಾರ್ಗದರ್ಶಿಯ ಅಗತ್ಯವಿದೆ. ಆತನನ್ನೇ 'ಗುರು' ಎನ್ನುವುದು. **'ದೂರತಃ ಪರ್ವತೋ ರಮ್ಯಃ'** ಎಂಬ ಸುಭಾಷಿತ ಸರಿಯೆ. ದೂರದಿಂದ ಬೆಟ್ಟಗಳು ಸುಂದರವಾಗಿ ಕಾಣುತ್ತವೆ. ಆದರೆ, ಹತ್ತಿರ ಹೋಗಿ ಪ್ರಯತ್ನಿಸಿದರೆ ಅವು ಭಯಂಕರ ಹಾಗೂ ತ್ರಾಸದಾಯಕ ಎನ್ನುವುದು ಅನುಭವಕ್ಕೆ ಬರುತ್ತವೆ. ಹಾಗೆಯೇ ಆಧ್ಯಾತ್ಮಿಕ ಜೀವನ ಕೂಡ. ಪರ್ವತಾರೋಹಿಗಳಲ್ಲಿ **'ಪರ್ವತಗಳು ನಮ್ಮನ್ನು ಹತ್ತಿಸಿಕೊಂಡರೆ ಮಾತ್ರವೇ ಹತ್ತೇವು'** ಎಂಬ ನಂಬಿಕೆಯಿದೆ. ಹಾಗೆಯೇ ಆಧ್ಯಾತ್ಮಿಕ ಶಿಖರಸ್ಥನಾದ ಭಗವಂತನು ತನ್ನ ಅನುಗ್ರಹದಿಂದ ನಮ್ಮನ್ನು ಹತ್ತಿಸಿಕೊಂಡರೆ ಮಾತ್ರವೇ ಆಧ್ಯಾತ್ಮಿಕ ಸಿದ್ಧಿ ಸಾಧ್ಯ. ಎಷ್ಟೆಷ್ಟು ನಮ್ಮ ಹತ್ತುವಿಕೆ ಕಷ್ಟಕರವಾಗಿರುವುದೋ, ಅಷ್ಟಷ್ಟೂ ಸೌಂದರ್ಯವನ್ನೂ, ಆನಂದವನ್ನೂ ಪರ್ವತಗಳು ನಮ್ಮೆದುರಿಗೆ ಬಿಚ್ಚಿಡುತ್ತವೆ. ಹಾಗೆಯೇ ಆಧ್ಯಾತ್ಮಿಕ ಜೀವನಯಾತ್ರೆಯೂ ತ್ರಾಸದಾಯಕ ಮತ್ತು ಕಷ್ಟಕರ. ಆದರೆ, ಅದರ ಸೌಂದರ್ಯ-ಆನಂದಗಳೂ ಅಷ್ಟೇ ಉನ್ನತ ಮಟ್ಟದ್ದಾಗಿವೆ.

# ಶ್ರೀಮದ್ಭಾಗವತ ಸಾರ



ಎ. ಮುರಳೀಧರ

## ಸಪ್ತಮ ಸ್ಕಂಧ

**ಜಯ–ವಿಜಯ:** ಬ್ರಹ್ಮದೇವರ ಮಾನಸಪುತ್ರರಾದ ಸನಕ ಸನಂದನಾದಿಗಳು ಅಖಂಡ ಬ್ರಹ್ಮಚಾರಿಗಳು, ಚಿರಬಾಲಕರು, ದಿಗಂಬರರು, ತ್ರಿಲೋಕಸಂಚಾರಿಗಳು. ಅವರು ಮಹಾಜ್ಞಾನಿಗಳು, ಅಸಾಮಾನ್ಯ ತಪೋನಿಧಿಗಳು. ಅವರೆಲ್ಲರೂ ಒಮ್ಮೆ ನಾರಾಯಣನ ದರ್ಶನ ಪಡೆಯಲು ವೈಕುಂಠಲೋಕಕ್ಕೆ ಬಂದರು. ಇವರನ್ನು ಸಾಧಾರಣ ವ್ಯಕ್ತಿಗಳೆಂದು ಭಾವಿಸಿದ ದ್ವಾರಪಾಲಕರಾದ ಜಯ ವಿಜಯರು ಅವರನ್ನು ಒಳಗೆ ಹೋಗಲು ಬಿಡದೆ, ಹೆಬ್ಬಾಗಿಲಲ್ಲೇ ತಡೆದರು. ಕೋಪಗೊಂಡ ಋಷಿಗಳು, "ದೈವದರ್ಶನಕ್ಕೆ ಅಡ್ಡಿಪಡಿಸುತ್ತಿರುವ ನೀವು ದೈತ್ಯರಂತೆ ವರ್ತಿಸುತ್ತಿದ್ದೀರಿ. ಆದ್ದರಿಂದ ದೈತ್ಯರಾಗಿಯೇ ಜನ್ಮತಳೆಯಿರಿ" ಎಂದು ಶಾಪನೀಡಿದರು.

ಋಷಿಗಳ ಶಾಪದಿಂದ ಜಯ–ವಿಜಯರು ಕಂಗಾಲಾದರು. ಅವರ ಪಾದಗಳ ಮೇಲೆ ಬಿದ್ದರು. ಶಾಪ ವಿಮೋಚನೆ ಮಾಡಬೇಕೆಂದು ಪ್ರಾರ್ಥಿಸಿದರು. ಕರುಣೆ ತೋರಿದ ಸನಕ ಸನಂದನಾದಿಗಳು, "ನಾವು ನೀಡಿದ ಶಾಪವು ನಡದೇ ತೀರುತ್ತದೆ. ನೀವು ದೈತ್ಯರಾಗಿ ಮೂರು ಜನ್ಮ ತಾಳುವಿರೋ ಅಥವಾ ಭಗವಂತನ ಭಕ್ತರಾಗಿ ಏಳು ಜನ್ಮ ತಾಳುವಿರೋ, ನೀವೇ ನಿರ್ಧರಿಸಿ" ಎಂದು ಹೇಳಿದರು. ಜಯ–ವಿಜಯರು, ಶೀಘ್ರವಾಗಿ ಭಗವಂತನ ಸಾಮೀಪ್ಯವನ್ನು ಮತ್ತೆ ಪಡೆಯಲು ಇಚ್ಛಿಸಿದರು. ಹಾಗಾಗಿ ದೈತ್ಯರ ಮೂರು ಜನ್ಮಗಳನ್ನೇ ಬಯಸಿದರು. ಅವರೇ ಮುಂದೆ ಹಿರಣ್ಯಾಕ್ಷ–ಹಿರಣ್ಯಕಶಿಪು, ರಾವಣ–ಕುಂಭಕರ್ಣ ಮತ್ತು ಶಿಶುಪಾಲ–ದಂತವಕ್ರರಾಗಿ ಮೂರು ಜನ್ಮಗಳನ್ನು ಪಡೆದರು.



**ವರಾಹಾವತಾರ:** ಕಶ್ಯಪ ಋಷಿಯ ಹೆಂಡತಿಯರಲ್ಲಿ ದಿತಿ ಮತ್ತು ಅದಿತಿ ಪ್ರಮುಖರು. ದಿತಿದೇವಿಗೆ ಪುತ್ರಸಂತಾನವಾಗಿರಲಿಲ್ಲ. ಅದಿತಿದೇವಿಯಲ್ಲಿ ಈಗಾಗಲೇ ದೇವತೆಗಳು ಜನಿಸಿದ್ದರು. ಒಂದು ದಿನ ಸಂಜೆಯ ಸಮಯ. ಪತಿಯು ಬೇಡಬೇಡವೆಂದರೂ ಕಾಮಾತುರಳಾಗಿ ದಿತಿದೇವಿಯು ಬಲವಂತವಾಗಿ ಆತನೊಂದಿಗೆ ಕೂಡಿದಳು. ಇದೊಂದು ಅನಾಚಾರ. ಹೀಗಾಗಿ ಋಷಿಮುನಿಗಳ ಶಾಂತಿಯ ಜೀವನಕ್ಕೆ ಧಕ್ಕೆ ತರುವಂತಹ, ಜಗತ್ತಿಗೇ ಕಂಟಕರಾದ ಹಿರಣ್ಯಕಶಿಪು ಮತ್ತು ಹಿರಣ್ಯಾಕ್ಷರು ದಿತಿದೇವಿಯ ಗರ್ಭದಲ್ಲಿ ಜನಿಸಿದರು.

ಹಿರಣ್ಯಕಶಿಪು ಭಾಗವತ ಧರ್ಮಕ್ಕೆ ಅಡ್ಡಿಯನ್ನು ಉಂಟುಮಾಡಿದನು. ಗೋವುಗಳನ್ನು, ಬ್ರಾಹ್ಮಣರನ್ನು ಸಂಹಾರ ಮಾಡಿದನು. ಯಜ್ಞಯಾಗಾದಿಗಳನ್ನು ಧ್ವಂಸಮಾಡಿದನು. ಹೀಗೆ ಲೋಕಕಂಟಕನಾದನು. ಅವನ ತಮ್ಮನಾದ ಹಿರಣ್ಯಾಕ್ಷನ ದೇಹಬಲ ಕೂಡ ಅಸಾಮಾನ್ಯವಾಗಿತ್ತು. ತನ್ನ ಸಮನಾದವರು ಈ ಲೋಕದಲ್ಲಿ ಯಾರೂ ಇಲ್ಲ ಎಂದು ಅವನು ಗರ್ವಪಡುತ್ತಿದ್ದನು. ಸಿಕ್ಕ ಸಿಕ್ಕ ಋಷಿಮುನಿಗಳ ರುಂಡಗಳನ್ನು ಚೆಲ್ಲಾಡುತ್ತಿದ್ದನು. ಸ್ತ್ರೀಯರನ್ನು ಅಪವಿತ್ರಗೊಳಿಸಿದನು. ಮದೋನ್ಮತ್ತನಾಗಿ ಇಡೀ ಭೂಮಂಡಲವನ್ನೇ ಅಪಹರಿಸಿ ಸಮುದ್ರದ ತಳದಲ್ಲಿ ಇಟ್ಟನು.

ಭೂಮಿಯು ಕಣ್ಮರೆಯಾದ್ದರಿಂದ ಬ್ರಹ್ಮನು ಹೌಹಾರಿದನು. ತನ್ನ ಸೃಷ್ಟಿಕಾರ್ಯಕ್ಕೆ ಧಕ್ಕೆಯಾಯಿತೆಂದು ಚಿಂತೆಗೊಳಗಾದನು. ಆಗ ಅವನ ಮೂಗಿನಿಂದ ಒಂದು ಅಂಗುಷ್ಠ ಗಾತ್ರದ ವರಾಹವು ಹೊರಬಿದ್ದಿತು. ಒಡನೆಯೇ ಅದು ಬೃಹದಾಕಾರವಾಗಿ ಬೆಳೆದು, ತನ್ನ ಅದ್ಭುತವಾದ ಕೋರೆಗಳಿಂದ ದೊಡ್ಡ ಘರ್ಜನೆಯನ್ನು ಮಾಡಿತು. ಇದರ ಶಬ್ದದಿಂದ ಹದಿನಾಲ್ಕು ಲೋಕಗಳೂ ತತ್ತರಿಸಿದವು. ದೈತ್ಯರ ಜಂಘಾಬಲವೇ ಉಡುಗಿಹೋಯಿತು. ದೇವತೆಗಳಿಗೆ ಸಂತಸವಾಯಿತು. ವರಾಹಮೂರ್ತಿಯು ಸಮುದ್ರ ತಳದಲ್ಲಿದ್ದ ಭೂಮಂಡಲವನ್ನು ಹಿಡಿದೆತ್ತಿದನು. ಅಡ್ಡ ಬಂದ ಹಿರಣ್ಯಾಕ್ಷನನ್ನು ಮಲ್ಲಯುದ್ಧದಲ್ಲಿ ಸಂಹರಿಸಿ ಭೂಮಿಯನ್ನು ಯಥಾಸ್ಥಿತಿಯಲ್ಲಿಟ್ಟನು. ದೇವತೆಗಳು ಬ್ರಹ್ಮದೇವನನ್ನು ಮುಂದಿಟ್ಟುಕೊಂಡು ವರಾಹಮೂರ್ತಿಯನ್ನು ಸ್ತುತಿಸಿದರು. ಅವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ವರಾಹ ದೇವರು ಅವರಿಗೆಲ್ಲ ಅಭಯದ ರಕ್ಷಣೆಯಿತ್ತು ಅದೃಶ್ಯನಾದನು.

**ಪ್ರಹ್ಲಾದನ ಕಥೆ:** ಸಹೋದರನ ಮರಣದ ಸುದ್ದಿಯನ್ನು ತಿಳಿದ ಹಿರಣ್ಯಕಶಿಪುವಿಗೆ ಅಪಾರ ದುಃಖವುಂಟಾಯಿತು. ಮನೆಗೆ ಹಿಂತಿರುಗಿದ ಅವನು ತಾಯಿ ದಿತಿದೇವಿಯನ್ನು ಸಮಾಧಾನ ಪಡಿಸಿದನು. ತಮ್ಮನ ಹೆಂಡತಿಯನ್ನು ಮತ್ತು ಸಂಬಂಧಿಕರನ್ನೆಲ್ಲ ಸಂತೈಸಿದನು. ನಂತರ ನಾರಾಯಣನಲ್ಲಿ ಕೋಪಗೊಂಡನು. ಹರಿಯ ಮೇಲೆ ಸೇಡು ತೀರಿಸಿಕೊಳ್ಳಬೇಕೆಂಬ ತವಕ ಅವನಲ್ಲಿ ದಿನೇ ದಿನೇ ಹೆಚ್ಚಾಗತೊಡಗಿತು. ಉರಿಯುವ ಬೆಂಕಿಗೆ ತುಪ್ಪ ಹಾಕಿದಾಗ ಉಂಟಾಗುವ ಜ್ವಾಲೆಯಂತೆ ಕೋಪವು ಏರತೊಡಗಿತು. ಇಡೀ ಭೂಮಂಡಲದಲ್ಲಿರುವ ದೈತ್ಯರನ್ನೆಲ್ಲ ಕರೆಸಿ ದೊಡ್ಡ ಸಭೆ ಏರ್ಪಡಿಸಿದನು. "ವಿಷ್ಣುವು ಕಳ್ಳ; ಹಂದಿಯ ರೂಪದಲ್ಲಿ ಬಂದು ನನ್ನ ಸಹೋದರನನ್ನು ಕೊಂದಿದ್ದಾನೆ. ಅವನ ಸೊಕ್ಕನ್ನು ಮುರಿಯಬೇಕಾಗಿದೆ. ಮುಂದಿನ ಕಾದಾಟದಲ್ಲಿ ಅವನ ಮರಣ ನಿಶ್ಚಿತ" ಎಂದು ಗಹಗಹಿಸಿ ನಕ್ಕನು. "ಭೂಲೋಕದಲ್ಲಿ ಋಷಿಗಳು ಯಜ್ಞ, ವೇದಾಧ್ಯಯನ ಇತ್ಯಾದಿಗಳನ್ನು ಮಾಡುತ್ತಿದ್ದಾರೆ. ಅವರು ಕೈಗೊಳ್ಳುವ ಪ್ರತಿಯೊಂದು ದೇವತಾಕಾರ್ಯ ಕೂಡ ದೇವತೆಗಳಿಗೆ ಶಕ್ತಿಯನ್ನು ತುಂಬುತ್ತದೆ. ಆದ್ದರಿಂದ, ದೈತ್ಯರಾದ ನಾವು ಮೊದಲು ಅವನ್ನು ತಡೆಯಬೇಕು. ಇಂತಹ ಕಾರ್ಯಗಳು ನಡೆಯುತ್ತಿದ್ದರೆ ಅವನ್ನು ಧ್ವಂಸಗೊಳಿಸಿ ಅಡ್ಡ ಬಂದವರ ರುಂಡಗಳನ್ನು ಚೆಂಡಾಡಿ" ಎಂದಾಜ್ಞೆಯಿತ್ತನು.



ಇಷ್ಟೆಲ್ಲಾ ಮಾಡಿದರೂ, ಹಿರಣ್ಯಕಶಿಪುವಿಗೆ ನೆಮ್ಮದಿಯಾಗಲಿಲ್ಲ. ದೀರ್ಘಕಾಲ ತಪಸ್ಸು ಮಾಡಿ, ಬಲಶಾಲಿಯಾಗಿ, ತ್ರಿಲೋಕಗಳಲ್ಲೂ ತನಗೆ ಸಮರಿಲ್ಲದಂತಹ ಪರಿಸ್ಥಿತಿ ನಿರ್ಮಾಣ ಮಾಡಬೇಕೆಂದು ನಿರ್ಧರಿಸಿದನು. ತಕ್ಷಣವೇ ತನ್ನ ಅಮಾತ್ಯರನ್ನೆಲ್ಲ ಕರೆಸಿ ರಾಜ್ಯದ ಅಧಿಕಾರವನ್ನು ಅವರಿಗೆ ಒಪ್ಪಿಸಿದನು. ಮಂದಾರಪರ್ವತಕ್ಕೆ ಹೋಗಿ, ಏಕಾಂತಸ್ಥಳದಲ್ಲಿ ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದನು. ನಿದ್ರೆ, ಆಹಾರ ಎಲ್ಲವನ್ನೂ ತೊರೆದು ಒಂದೇ ಕಾಲಿನಲ್ಲಿ ನಿಂತು ತಪಸ್ಸನ್ನು ಆಚರಿಸಿದನು. ಕಾಲ ಕಳೆದಂತೆ ಹಿರಣ್ಯಕಶಿಪುವಿನ ಸುತ್ತಲೂ ಹುತ್ತ ಬೆಳೆಯಿತು. ಬಿಸಿಲು, ಮಳೆ, ಚಳಿ, ಗಾಳಿ ಮುಂತಾದ ಯಾವ ಪ್ರಾಕೃತಿಕ ವಿಕೋಪಗಳೂ ಹಿರಣ್ಯಕಶಿಪುವಿನ ತಪಸ್ಸನ್ನು ಧೃತಿಗೆಡಿಸಲಿಲ್ಲ. ಆತನ ತಪಸ್ಸಿನ ಜ್ವಾಲೆಯು ಮೂರುಲೋಕವನ್ನೂ ಆವರಿಸಿತು. ಹಿರಣ್ಯಕಶಿಪುವಿನ ತಪಸ್ಸಿಗೆ ಮೆಚ್ಚಿದ ಬ್ರಹ್ಮನು ಪ್ರತ್ಯಕ್ಷನಾಗಿ, ತನ್ನ ಕಮಂಡಲುವಿನಿಂದ ಮಂತ್ರದ ನೀರನ್ನು ಅವನ ಮೇಲೆ ಪ್ರೋಕ್ಷಿಸಿದನು. ಕೂಡಲೇ ಹಿರಣ್ಯಕಶಿಪುವಿನಲ್ಲಿ ನವಚೈತನ್ಯ ತುಂಬಿತು. ತಪೋಬಲದಿಂದಾಗಿ ಆತನಲ್ಲಿ ಅಸಾಮಾನ್ಯ ಕಾಂತಿ ಕಂಡುಬಂತು. ಏನು ವರ ಬೇಕೆಂದು ಬ್ರಹ್ಮನು ಕೇಳಲು ಹಿರಣ್ಯಕಶಿಪು, "ತಂದೆಯೇ, ನಿನ್ನ ಸೃಷ್ಟಿಯಲ್ಲಿನ ಯಾವ ಜೀವಜಂತುವಿನಿಂದಲೂ ನನಗೆ ಮರಣ ಬಾರದಿರಲಿ. ಮನೆಯ ಒಳಗಾಗಲಿ ಹೊರಗಾಗಲಿ, ಭೂಮಿಯ ಮೇಲಾಗಲಿ ಆಕಾಶದಲ್ಲಾಗಲಿ ಮರಣ ಬರಲೇಬಾರದು. ಇಂದ್ರ ಮುಂತಾದ ದೇವತೆಗಳಿಗಿರುವಂಥ ಶಕ್ತಿ ಸಾಮರ್ಥ್ಯ ಉಂಟಾಗಬೇಕು" ಎಂದನು. ಅದಕ್ಕೆ ಬ್ರಹ್ಮದೇವನು 'ತಥಾಸ್ತು' ಎಂದು ಹೇಳಿ ಹೊರಟುಹೋದನು.

ಬ್ರಹ್ಮನ ವರಬಲದಿಂದ ಕೊಬ್ಬಿದ ಹಿರಣ್ಯಕಶಿಪು ಮದೋನ್ಮತ್ತನಾದನು. ಸಕಲ ಸೈನ್ಯಸಮೇತ ಯುದ್ಧಕ್ಕೆ ಹೊರಟೇಬಿಟ್ಟನು. ದಶದಿಕ್ಕುಗಳನ್ನೂ ಜಯಿಸಿ ದೇವತೆಗಳು ಮತ್ತು ಮಾನವರೆಲ್ಲರನ್ನೂ ಸೋಲಿಸಿದನು. ಯಕ್ಷ ಗಂಧರ್ವ ಮುಂತಾದ ಸಕಲ ಜೀವ ರಾಶಿಗಳೂ ಅವನ ಆರ್ಭಟಕ್ಕೆ ನಲುಗಿದವು. ಇದಲ್ಲದೆ ಹಿರಣ್ಯ ಕಶಿಪುವು ಇಂದ್ರನನ್ನು ಅಮರಾವತಿಯಿಂದ ಓಡಿಸಿ, ಆತನ ಐಶ್ವರ್ಯವನ್ನೆಲ್ಲ ದೋಚಿದನು. ಇದಷ್ಟೇ ಅಲ್ಲ, ವಿಷ್ಣುವಿನ ಹೆಸರಿನಲ್ಲಿ ನಡೆಯುತ್ತಿದ್ದ ಯಜ್ಞಯಾಗಾದಿಗಳನ್ನು ನಿಲ್ಲಿಸಿದನು. ಇನ್ನುಮುಂದೆ ತನ್ನ ಹೆಸರಿನಲ್ಲೇ ಯಜ್ಞಯಾಗಾದಿಗಳನ್ನು ನಡೆಸಬೇಕೆಂದು ಕಟ್ಟಾಜ್ಞೆ ವಿಧಿಸಿದನು. ದೇವತೆಗಳಿಗೆ ಸಲ್ಲಬೇಕಾದ ಹವಿಸ್ಸನ್ನು ತಾನೇ ಸ್ವೀಕರಿಸಿದನು.

ಹಿರಣ್ಯಕಶಿಪುವಿನ ಉಪಟಳದಿಂದ ದೇವತೆಗಳು ಬೇಸತ್ತರು. ಋಷಿಗಳು, ಮುನಿಗಳು ಸಂಕಟಕ್ಕೊಳಗಾದರು. ಎಲ್ಲರೂ ಒಂದಾಗಿ ಶ್ರೀಮನ್ನಾರಾಯಣನನ್ನು ಭಕ್ತಿಯಿಂದ ಪ್ರಾರ್ಥಿಸಿದರು. ಅವನಲ್ಲಿ ಶರಣುಹೋದರು. "ಬೇಗ ಬಂದು ಈ ದುರಾತ್ಮನಿಂದ ನಮ್ಮನ್ನು ಪಾರುಮಾಡು" ಎಂದು ದೀನರಾಗಿ ಬೇಡಿದರು. ಆಗ ಒಂದು ಅಶರೀರವಾಣಿ ಕೇಳಿಸಿತು: "ಎಲೈ ದೇವತೆಗಳೇ, ಋಷಿಮುನಿಗಳೇ, ನೀವು ಭಯಪಡಬೇಡಿ. ನಿಮಗೆ ಬಂದ ಗಂಡಾಂತರದ ಅರಿವು ನನಗಿದೆ. ಸ್ವಲ್ಪ ಕಾಲ ತಾಳಿರಿ, ಹಿರಣ್ಯಕಶಿಪುವಿಗೆ ಒಬ್ಬ ಮಗನು ಜನಿಸುವನು. ಅವನು ಶ್ರೇಷ್ಠ ಭಕ್ತನಾಗುವನು. ಅವನ ದಾರಿಗೆ ಹಿರಣ್ಯಕಶಿಪು ಅಡ್ಡಿಪಡಿಸಿದಾಗ, ಆತನ ಸಂರಕ್ಷಣೆಗಾಗಿ ನಾನು ಅವತರಿಸಿಬರುತ್ತೇನೆ."

ಹಿರಣ್ಯಕಶಿಪುವಿನ ಹೆಂಡತಿಯ ಹೆಸರು ಕಯಾದು. ಇದೇ ಸಂದರ್ಭದಲ್ಲಿ ಅವಳು ಗರ್ಭಿಣಿಯಾದಳು. ಪ್ರಹ್ಲಾದನೆಂಬ ಪುತ್ರನಿಗೆ ಜನ್ಮ ನೀಡಿದಳು. ಪ್ರಹ್ಲಾದನು ಸುಶೀಲನೂ, ಸದ್ಗುಣಸಂಪನ್ನನೂ ಆಗಿದ್ದನು. ಗುರುಹಿರಿಯರನ್ನು ಆದರದಿಂದ ಗೌರವಿಸುತ್ತಿದ್ದನು. ಎಲ್ಲ ಜೀವ ಸಂಕುಲಗಳನ್ನೂ ಪ್ರೀತಿಸುತ್ತಿದ್ದನು. ದೀನರಿಗೆ ಕರುಣೆ ತೋರುತ್ತಿದ್ದನು; ಭಗವಂತನಾದ ನಾರಾಯಣನ ನಾಮಸ್ಮರಣೆಯನ್ನು ಯಾವಾಗಲೂ ಮಾಡುತ್ತಿದ್ದನು.

ಪ್ರಹ್ಲಾದನ ಈ ಸಾತ್ವಿಕ ಗುಣಕ್ಕೆ ನಾರದ ಮಹರ್ಷಿಗಳ ಅನುಗ್ರಹವೇ ಕಾರಣವಾಗಿತ್ತು. ಅವನು ತಾಯಿಯ ಗರ್ಭದಲ್ಲಿದ್ದ ಸಮಯದಲ್ಲಿ ಹಿರಣ್ಯಕಶಿಪು ತಪಸ್ಸಿಗೆ ತೆರಳಿದ್ದನು. ಆಗ ಇದೇ ಸಮಯವೆಂದುಕೊಂಡು ಇಂದ್ರನು, ಕಯಾದುವಿನ ಗರ್ಭದಲ್ಲಿ ಜನಿಸುವ ರಾಕ್ಷಸನಿಂದ ಮುಂದೆ ಆಗಬಹುದಾದ ತೊಂದರೆಯನ್ನು ನಿವಾರಿಸಿಕೊಳ್ಳಲು, ಆಕೆಯನ್ನು ಸಂಹರಿಸಲು ಎಳೆದೊಯ್ಯುತ್ತಿದ್ದನು. ದಾರಿಯಲ್ಲಿ ನಾರದ ಮುನಿಗಳು ಇಂದ್ರನನ್ನು ತಡೆದರು. "ಇಂದ್ರ, ನೀನು ಮಹಾನ್ ಪ್ರಮಾದವನ್ನು ಎಸಗುತ್ತಿರುವೆ. ಈಕೆಯ ಗರ್ಭದಲ್ಲಿ ದೊಡ್ಡ ಭಗವದ್ಭಕ್ತನು ಜನಿಸುವನು. ಅವನಿಂದ ಲೋಕವೆಲ್ಲ ಬೆಳಕು ಕಾಣುತ್ತದೆ" ಎಂದು ಹೇಳಿ ಕಯಾದುವನ್ನು ಅವನಿಂದ ಬಿಡಿಸಿ ತಮ್ಮ ಆಶ್ರಮಕ್ಕೆ ಕರೆದೊಯ್ದರು. ಆಶ್ರಮದಲ್ಲಿ ಭಗವಂತನಾದ ವಿಷ್ಣುವಿನ ಚರಿತ್ರೆ, ಮಹಿಮೆ – ಎಲ್ಲವನ್ನೂ ಆಗಿಂದಾಗ್ಗೆ ಕಯಾದುವಿಗೆ

ತಿಳಿಹೇಳಿದರು. ಗರ್ಭದಲ್ಲಿದ್ದ ಪ್ರಹ್ಲಾದನು ಇದರಿಂದ ಪ್ರಭಾವಿತನಾಗಿ, ಜನಿಸುತ್ತಲೇ ಭಾಗವತೋತ್ತಮನಾದನು.

ಪ್ರಹ್ಲಾದನಿಗೆ ಐದು ವರ್ಷ ತುಂಬುತ್ತಲೇ ಹಿರಣ್ಯಕಶಿಪುವು ಅವನನ್ನು ವಿದ್ಯಾಭ್ಯಾಸಕ್ಕಾಗಿ ಚಂಡ-ಮರ್ಕರ ಗುರುಕುಲಕ್ಕೆ ಕಳುಹಿಸಿದನು. ಪ್ರಹ್ಲಾದನ ಜೊತೆಗೆ ಇನ್ನೂ ಅನೇಕ ದೈತ್ಯಬಾಲಕರು ಗುರುಕುಲದಲ್ಲಿದ್ದರು.

ಕೆಲವು ಕಾಲದ ನಂತರ ಹಿರಣ್ಯಕಶಿಪುವು ಮಗನನ್ನು ನೋಡಬೇಕೆಂಬ ಆಶಯದಿಂದ ಅವನನ್ನು ಅರಮನೆಗೆ ಕರೆಸಿದನು. ಮಗನನ್ನು ಪ್ರೀತಿಯಿಂದ ಎತ್ತಿಕೊಂಡು ಮುದ್ದಾಡಿ, "ಮಗು, ಗುರುಕುಲದಲ್ಲಿ ಏನು ಕಲಿತೆ?" ಎಂದು ಕೇಳಿಕೊಂಡನು. ಅದಕ್ಕೆ ಪ್ರಹ್ಲಾದನು, "ತಂದೆಯೇ, ಗುರುಗಳು ಕೇವಲ ಲೌಕಿಕ ಜೀವನದ ಮಹತ್ವವನ್ನಷ್ಟೇ ಹೇಳಿದ್ದಾರೆ. ಇದಕ್ಕಿಂತ, ಎಲ್ಲವನ್ನೂ ತೊರೆದು ಶ್ರೀಮನ್ನಾರಾಯಣನನ್ನು ಸ್ಮರಿಸುವುದೇ ಶ್ರೇಯಸ್ಕರವಾಗಿದೆ" ಎಂದನು.

ಮಗನ ಮಾತನ್ನು ಕೇಳಿದ ಹಿರಣ್ಯಕಶಿಪು ದಂಗಾಗಿ ಹೋದನು. ಯಾರೋ ಹರಿಭಕ್ತರು ವೇಷ ಮರೆಸಿಕೊಂಡು ಆಶ್ರಮಕ್ಕೆ ಬಂದು, ತನ್ನ ಪುತ್ರನ ಬುದ್ಧಿಯನ್ನು ಕೆಡಿಸಿರಬೇಕೆಂದುಕೊಂಡನು. ಕೂಡಲೇ ಚಂಡ-ಮರ್ಕರನ್ನು ಕರೆಸಿದನು. "ವೇಷ ಮರೆಸಿಕೊಂಡು ಬಂದಿರುವ ಯಾರೋ ಹರಿಭಕ್ತರು ಬೋಧಿಸಿದ ದೈತ್ಯವಿರೋಧಿ ಬುದ್ಧಿಯನ್ನು ಪ್ರಹ್ಲಾದನು ಕಲಿತಿದ್ದಾನೆ. ಇವನನ್ನು ಕರೆದುಕೊಂಡು ಹೋಗಿ ಹರಿಯಲ್ಲಿ ದ್ವೇಷವನ್ನು ಕಲಿಸಿಕೊಡಿ" ಎಂದು ಎಚ್ಚರಿಸಿ ಮಗನನ್ನು ಕಳುಹಿಸಿಕೊಟ್ಟನು.



ಬಾಲಕ ಪ್ರಹ್ಲಾದನಲ್ಲಾದ ಬದಲಾವಣೆಯನ್ನು ಕಂಡು ಚಂಡ-ಮರ್ಕರು ಅವಾಕ್ಕಾದರು. ತಮ್ಮ ಪಠ್ಯಕ್ರಮದಲ್ಲಿ ಎಲ್ಲಿಯೂ ಹರಿಭಕ್ತಿಯೇ ಇರಲಿಲ್ಲ; ಆದರೂ, ಪ್ರಹ್ಲಾದನು ಹರಿಭಕ್ತ ಹೇಗಾದ ಎಂಬುದು ಅವರಿಗೆ ಅಚ್ಚರಿ ತಂದಿತ್ತು. ಪರಿಪರಿಯಾಗಿ ಪ್ರಶ್ನಿಸಿದಾಗ ಪ್ರಹ್ಲಾದನು, "ಗುರುಗಳೇ, ಸರ್ವೋತ್ತಮನಾದ ಭಗವಂತನಿಗೆ ದೇವತೆಗಳು, ದಾನವರು, ಮಾನವರೆಂಬ ಯಾವ ಭೇದಭಾವವಾಗಲಿ, ತಾರತಮ್ಯವಾಗಲಿ ಇಲ್ಲ. ದೇಹವೇ ಆತ್ಮವಲ್ಲ. ಲೌಕಿಕ ಸುಖವೇ ಶಾಶ್ವತ ಎಂಬವಾದ ಸರಿಯಲ್ಲ" ಎಂದನು.

ಚಂಡ-ಮರ್ಕರು ಬಗೆಬಗೆಯ ಉಪಾಯಗಳಿಂದ ಪ್ರಹ್ಲಾದನ ಮನಸ್ಸನ್ನು ಬದಲಾಯಿಸಲು ಪ್ರಯತ್ನಪಟ್ಟರು. ಆತನನ್ನು ಶಿಕ್ಷೆಗೂ ಒಳಪಡಿಸಿದರು. ಧರ್ಮವಿರೋಧಿಯಾದ ವಿಷಯಗಳನ್ನು ಬೋಧಿಸಿದರು. ಪ್ರಹ್ಲಾದನು ಅವರು ಹೇಳಿದ್ದನ್ನೆಲ್ಲಾ ಕೇಳಿಸಿಕೊಂಡನು. ಆದರೆ, ಅವನ ಹರಿಭಕ್ತಿಯಲ್ಲಿ ಕಿಂಚಿತ್ತೂ ಕಡಮೆಯಾಗಲಿಲ್ಲ.

ಬಹಳ ದಿನಗಳಾದ ಮೇಲೆ ಪ್ರಹ್ಲಾದನನ್ನು ತಾಯಿ ಕಯಾದುದೇವಿಯ ಬಳಿಗೆ ಗುರುಗಳು ಕರೆದುಕೊಂಡು ಹೋದರು. ತಾಯಿಯು ಮಗನನ್ನು ಕಾಣುತ್ತಲೇ, ಅವನನ್ನು ಎತ್ತಿಕೊಂಡು ಮುದ್ದಾಡಿ ಆದರಿಸಿ ಉಪಚರಿಸಿದಳು. ಮಗನಿಗೆ ರತ್ನ, ವಜ್ರ, ವೈಡೂರ್ಯಗಳನ್ನು ತೊಡಿಸಿ, ರಾಜಪೋಷಾಕನ್ನು ಹಾಕಿಸಿ ರಾಜಸಭೆಗೆ ಕರೆತಂದಳು. ಹಿರಣ್ಯಕಶಿಪುವು ರಾಜಸಭೆಯಲ್ಲಿ ಸಿಂಹಾಸನದ ಮೇಲೆ ವಿರಾಜಮಾನನಾಗಿ ಕುಳಿತಿದ್ದನು. ಪ್ರಹ್ಲಾದನು ತಂದೆಗೆ ನಮಸ್ಕರಿಸಿದನು. ರಾಜನು ಮಗನನ್ನು ಮಮತೆಯಿಂದ ಮೇಲೆತ್ತಿಕೊಂಡು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡನು; ಪ್ರೀತಿಯಿಂದ ಮಾತನಾಡಿದನು. "ಮಗು, ಈ ಬಾರಿ ಗುರುಕುಲದಲ್ಲಿ ಏನೇನು ಕಲಿತೆ?" ಎಂದು ಕೇಳಿದನು.

ಅದಕ್ಕೆ ಪ್ರಹ್ಲಾದನು, "ತಂದೆಯೇ, ಶ್ರೀಮನ್ನಾರಾಯಣನನ್ನು ಯಾವಾಗಲೂ ಸ್ಮರಣೆ ಮಾಡುವುದು, ಅವನನ್ನೇ ಪೂಜಿಸುವುದು, ಆರಾಧಿಸುವುದು, ಆತನ ಮೇಲಿನ ಸರ್ವಸಮರ್ಪಣಾಭಾವದಿಂದ ಜೀವನ ನಡೆಸುವುದೇ ಬದುಕಿನ ಸಾರಸರ್ವಸ್ವವಾಗಿದೆ" ಎಂದನು. ಪ್ರಹ್ಲಾದನ ನುಡಿಯನ್ನು ಕೇಳುತ್ತಲೇ, ಹಿರಣ್ಯಕಶಿಪುವಿನ ಕೋಪ ನೆತ್ತಿಗೇರಿತು. ತನ್ನ ಮಗನ ಬಾಯಿಯಿಂದ ಹೊರಟ ನಾರಾಯಣ ಸ್ಮರಣೆಯು ಆತನ ಕಿವಿಗೆ ಕಾದ ಸೀಸವನ್ನು ಹೊಯ್ದಂತಾಯಿತು. ನಾರಾಯಣನ ಸ್ತುತಿಯನ್ನು ಅವನು ಸಹಿಸದಾದನು. ಯಾರ ಸ್ಮರಣೆ ಪೂಜೆ ಯಜ್ಞಯಾಗಾದಿಗಳನ್ನು ಅವನು ತನ್ನ ರಾಜ್ಯದಲ್ಲಿ ನಿಷೇಧಿಸಿದ್ದನೊ, ಆ ನಾರಾಯಣನ ಬಗ್ಗೆ ಶ್ರದ್ಧೆ, ಭಕ್ತಿಗಳು ತನ್ನ ಮಗನಲ್ಲಿಯೇ ಇರುವುದನ್ನು ಕಂಡು ಆಕ್ರೋಶಗೊಂಡನು. ಕೋಪಕ್ಕೊಳಗಾದ ವ್ಯಕ್ತಿಯು ಮನಶ್ಶಾಂತಿಯನ್ನು ಕಳೆದುಕೊಳ್ಳುತ್ತಾನೆ. ಹಿರಣ್ಯಕಶಿಪುವಿನ ಸಿಟ್ಟು ಚಂಡ-ಮರ್ಕರತ್ತ ತಿರುಗಿತು. "ಎಲೈ ಅಧಮರೇ, ನನ್ನ ಮನೆಯ ಅನ್ನ ಉಂಡು ನನಗೇ ದ್ರೋಹ ಬಗೆದಿದ್ದೀರಲ್ಲವೇ? ನನ್ನ ಆಜನ್ಮಶತ್ರುವಾದ ಹರಿಯ ಸ್ಮರಣೆಯನ್ನು ನನ್ನ ಮಗನಿಗೆ ಕಲಿಸಿದ್ದೀರಾ? ನನ್ನ ರಾಜ್ಯದಲ್ಲಿ ಹರಿಯ ಭಕ್ತರಿಗೆ ಯಾವ ಶಿಕ್ಷೆಯಾಗುತ್ತದೆ ಎಂಬುದು ನಿಮಗೆ ತಿಳಿದಿಲ್ಲವೇ?" ಎಂದು ಘರ್ಜಿಸಿದನು.

ಹಿರಣ್ಯಕಶಿಪುವಿನ ಆರ್ಭಟವನ್ನು ಕಂಡು ಚಂಡ-ಮರ್ಕರು ಗಡಗಡ ನಡುಗಿದರು, ಗಾಬರಿಯಿಂದ ಅವರ ಬಾಯಿಯಲ್ಲಿ ಮಾತೇ ಹೊರಡಲಿಲ್ಲ. ನಂತರ ಸುಧಾರಿಸಿಕೊಂಡು, "ದೈತ್ಯೇಂದ್ರ, ನಾವು ನಿನ್ನ ಮಗನಿಗೆ ಹರಿಯ ಮೇಲೆ ಶ್ರದ್ಧೆ ಭಕ್ತಿಯನ್ನು ಹೇಳಿಕೊಟ್ಟಿಲ್ಲ. ಇದು ಅವನಿಗೆ ಹುಟ್ಟಿನಿಂದಲೇ ಬಂದಿರಬೇಕು. ಇದರಲ್ಲಿ ನಮ್ಮ ತಪ್ಪೇನೂ ಇಲ್ಲ. ನಮ್ಮನ್ನು ಮನ್ನಿಸು" ಎಂದು ದೀನರಾಗಿ ಕೋರಿಕೊಂಡರು. ಅನಂತರ ಮಗನತ್ತ ತಿರುಗಿದ ಹಿರಣ್ಯಕಶಿಪು, "ನಿನಗೆ ನನ್ನ ಶತ್ರುವಿನ ಗುಣಗಾನವನ್ನು ಯಾರು ಹೇಳಿಕೊಟ್ಟರು?" ಎಂದು ಕೇಳಿದನು. ಅದಕ್ಕೆ ಪ್ರಹ್ಲಾದನು ಹೀಗೆಂದನು: "ಅಪ್ಪ, ಭಗವಂತನ ಮೇಲಿನ ಭಕ್ತಿಯನ್ನು ಯಾರೂ ಹೇಳಿಕೊಡುವುದಿಲ್ಲ. ಸಾತ್ವಿಕರಿಗೆ ಅದು ಅವರ ಹೃದಯದಲ್ಲೇ ಇರುತ್ತದೆ. ಸದಾ ಲೌಕಿಕ ಸುಖವನ್ನೇ ಶಾಶ್ವತ ಎಂದು ತಿಳಿದವರಿಗೆ, ಭಗವಂತನ ಮೇಲಿನ ಭಕ್ತಿ ಮೂಡಲಾರದು. ಮಹಾತ್ಮರ ಸೇವೆಯಿಂದ ಮತ್ತು ಅವರ ಅನುಗ್ರಹದಿಂದ ಮಾತ್ರವೇ ಪರಮಾತ್ಮನಲ್ಲಿ ಶ್ರದ್ಧೆ ಭಕ್ತಿಗಳು ಮೂಡುತ್ತವೆ."

ಪ್ರಹ್ಲಾದನ ಒಂದೊಂದು ನುಡಿಯಿಂದಲೂ, ಹಿರಣ್ಯಕಶಿಪುವಿಗೆ ಶೂಲದಿಂದ ಇರಿದಂತಾಗುತ್ತಿತ್ತು. ಅವನು ಸಿಟ್ಟಿನಿಂದ ಕಿಡಿಕಿಡಿಯಾದನು. ಅವನ ಕಣ್ಣುಗಳು ಕೆಂಪಡರಿದವು. ಕೂಡಲೇ ತನ್ನ

ಮಗನನ್ನು ತೊಡೆಯಿಂದ ಕೆಳಕ್ಕೆ ನೂಕಿದನು. "ಎಲೈ ಭಟರೇ, ಇವನನ್ನು ಈ ಕೂಡಲೇ ಇಲ್ಲಿಂದ ಕರೆದೊಯ್ಯಿರಿ, 'ಕುಲಕ್ಕೆ ಮೃತ್ಯು, ಕೊಡಲಿಯ ಕಾವು' ಎನ್ನುವಂತೆ, ಇವನು ದೈತ್ಯಕುಲದ ದ್ರೋಹಿಯಾಗಿದ್ದಾನೆ. ಇವನ ಮೇಲೆ ನನಗಿನ್ನಾವ ಮೋಹವೂ ಇಲ್ಲ. ಇವನನ್ನು ಅತ್ಯುಗ್ರವಾಗಿ ಹಿಂಸಿಸಿ ಕೊಂದುಹಾಕಿರಿ" ಎಂದಾಜ್ಞೆಯಿತ್ತನು.

ರಾಜಭಟರು ಬಾಲಕ ಪ್ರಹ್ಲಾದನನ್ನು ಕರುಣೆಯೇ ಇಲ್ಲದೆ ದರದರನೆ ಎಳೆದುಕೊಂಡು ಹೋದರು. ಆಯುಧಸಹಿತರಾಗಿ ಆತನ ಸುತ್ತಲೂ ನೆರೆದರು. ತಮ್ಮಲ್ಲಿನ ಆಯುಧಗಳಿಂದ ಥಳಿಸಿ ಹಿಂಸಿಸಿದರು. ಪ್ರಹ್ಲಾದನು ಮಾತ್ರ ಮುಚ್ಚಿದ ಕಣ್ಣನ್ನು ತೆರೆಯದೆ ನಾರಾಯಣನ ಸ್ಮರಣೆಯನ್ನು ಮಾಡುತ್ತಿದ್ದನು. ಆನೆಯಿಂದ ತುಳಿಸಿದರೂ, ವಿಷಸರ್ಪಗಳಿಂದ ಕಚ್ಚಿಸಿದರೂ, ಪರ್ವತ ಶಿಖರಗಳಿಂದ ತಳ್ಳಿದರೂ, ಬೆಂಕಿ ಮತ್ತು ನೀರಿನಲ್ಲಿ ಹಾಕಿದರೂ ಶ್ರೀಹರಿಯ ನಾಮಸ್ಮರಣೆಯು ಪ್ರಹ್ಲಾದನನ್ನು ಎಲ್ಲ ತರಹದ ಅಪಾಯಗಳಿಂದಲೂ ಪಾರುಮಾಡಿತು. ಕಟ್ಟಕಡೆಗೆ ಹೆತ್ತ ತಾಯಿಯಿಂದಲೇ ಮಗನಿಗೆ ವಿಷಪ್ರಾಶನ ಮಾಡಿಸಿದರೂ ಅವನಿಗೆ ಏನೂ ಆಗಲಿಲ್ಲ. ಇದನ್ನು ನೋಡಿ ಹಿರಣ್ಯಕಶಿಪು ಚಡಪಡಿಸಿದನು. ಬ್ರಹ್ಮನಿಂದ ವರ ಪಡೆದ ತನಗೆ ಉಂಟಾದ ಮೊದಲನೆಯ ಸೋಲು ಇದೆಂದು ಭಾವಿಸಿ ಭಯದಿಂದ ಕಂಪಿಸಿದನು. ಚಂಡ–ಮರ್ಕರ ಸಲಹೆಯಂತೆ ಗುರುಕುಲಕ್ಕೆ ಪ್ರಹ್ಲಾದನನ್ನು ಮತ್ತೆ ಕಳುಹಿಸಿದನು.

ಗುರುಕುಲಕ್ಕೆ ಕರೆದುಕೊಂಡು ಬಂದ ಚಂಡ–ಮರ್ಕರು, ಪ್ರಹ್ಲಾದನಲ್ಲಿ ವಿಶೇಷ ಆಸಕ್ತಿ ವಹಿಸಿ ವಿಷ್ಣುವಿನ ಮೇಲೆ ದ್ವೇಷವನ್ನೂ ಲೌಕಿಕ ವಿಷಯಗಳ ಹಿರಿಮೆಯನ್ನೂ ಮತ್ತೊಮ್ಮೆ ಹೇಳಿಕೊಟ್ಟರು. ಉಳಿದ ದೈತ್ಯಬಾಲಕರಿಗೂ ಇದನ್ನೇ ಹೇಳಿಕೊಟ್ಟರು. ಒಂದು ದಿನ ಚಂಡ–ಮರ್ಕರು ಗೃಹಕೃತ್ಯಕ್ಕಾಗಿ ಆಶ್ರಮದಿಂದ ಹೊರಗೆ ಹೋಗಿದ್ದರು. ಪ್ರಹ್ಲಾದನು ದೈತ್ಯ ಬಾಲಕರಿಗೆಲ್ಲ ಭಗವಾನ್ ಹರಿಯ ಸ್ಮರಣೆ ಮತ್ತು ಅದರಿಂದ ಸಿಗುವ ಮೋಕ್ಷದ ಬಗ್ಗೆ ತಿಳಿಸಿಹೇಳಿದನು. ಬಾಲಕರಿಗೆಲ್ಲ ಪ್ರಹ್ಲಾದನ ಉಪದೇಶ ಮನಸ್ಸಿಗೆ ತುಂಬಾ ಹಿಡಿಸಿತು. ಅವರೆಲ್ಲರೂ ಅವನೊಂದಿಗೆ ಹರಿಸಂಕೀರ್ತನೆ ಮಾಡತೊಡಗಿದರು.



**ನರಸಿಂಹಾವತಾರ:** ಕೆಲಸದ ನಿಮಿತ್ತ ಹೊರಗಡೆ ತೆರಳಿದ್ದ ಚಂಡ–ಮರ್ಕರು ಗುರುಕುಲಕ್ಕೆ ಹಿಂತಿರುಗಿದಾಗ, ಅಲ್ಲಿ ಕೇಳಿಬರುತ್ತಿದ್ದ ಹರಿಸಂಕೀರ್ತನೆಯನ್ನು ಕೇಳಿ ದಿಙ್ಮೂಢರಾಗಿ ಹೋದರು. ಕೂಡಲೇ, ಅರಮನೆಗೆ ಧಾವಿಸಿಬಂದು ಗುರುಕುಲದ ಪರಿಸ್ಥಿತಿಯನ್ನು ಹಿರಣ್ಯಕಶಿಪುವಿಗೆ ನಿವೇದಿಸಿದರು. ಒಡನೆಯೇ ಗುರುಕುಲಕ್ಕೆ ಧಾವಿಸಿ ಬಂದ ಹಿರಣ್ಯಕಶಿಪುವು, ಪ್ರಹ್ಲಾದನು ಬಾಲಕರನ್ನು ತನ್ನ ಸುತ್ತಲೂ ಸೇರಿಸಿಕೊಂಡು ಹರಿಸಂಕೀರ್ತನೆ ಮಾಡುತ್ತಿರುವುದನ್ನು ಕಂಡನು. ದರದರನೆ ಪ್ರಹ್ಲಾದನನ್ನು ಅರಮನೆಗೆ ಕರೆತಂದು, ತುಂಬಿದ ಸಭೆಯ ಮುಂದೆ ನಿಲ್ಲಿಸಿದನು. ಕಣ್ಣುಗಳಲ್ಲಿ ಕೆಂಡಕಾರುತ್ತಾ ಕಟಕಟನೆ ಹಲ್ಲನ್ನು ಕಡಿದನು. "ಎಲೈ ಕುಲದ್ರೋಹಿ, ಅಂಜುಬುರುಕನಾದ ಆ ನಿನ್ನ ಹರಿಯು ಎಲ್ಲಿದ್ದಾನೆ?" ಎಂದನು. "ತಂದೆಯೇ, ಅವನು ಎಲ್ಲೆಡೆಯಲ್ಲಿಯೂ, ಎಲ್ಲ ಕಾಲದಲ್ಲೂ ಇರುವನು" ಎಂದು ಪ್ರಹ್ಲಾದನು ನುಡಿದನು. ಹಿರಣ್ಯಕಶಿಪು ಅರಮನೆಯಲ್ಲಿನ ಕಂಬವೊಂದನ್ನು ತೋರಿಸುತ್ತಾ, "ಈ ಕಂಬದಲ್ಲಿ ನಿನ್ನ ನಾರಾಯಣನು ಇರುವನೇ?" ಎಂದು ಕೇಳಿದನು. ಪ್ರಹ್ಲಾದನು ಶಾಂತಿಯಿಂದಲೇ, "ನನ್ನಲ್ಲಿ, ನಿಮ್ಮಲ್ಲಿ, ನೀವು ತೋರಿಸುತ್ತಿರುವ ಕಂಬದಲ್ಲಿಯೂ ಇದ್ದಾನೆ" ಎಂದನು.

ಕ್ರೋಧಾವಿಷ್ಟನಾದ ಹಿರಣ್ಯಕಶಿಪು ತನ್ನ ಗದೆಯಿಂದ ಆ ಕಂಬಕ್ಕೆ ಪ್ರಹಾರ ಮಾಡಿದನು. ಅವನ ಹೊಡೆತಕ್ಕೆ ಕಂಬವು ಸೀಳಿತು, ತಕ್ಷಣವೇ ಹದಿನಾಲ್ಕು ಲೋಕಗಳು ಗಡಗಡ ನಡುಗುವಂತಹ ಘರ್ಜನೆ ಅದರ ಒಳಗಿಂದ ಕೇಳಿಬಂತು. ಕಂಬದ ಮಧ್ಯದಿಂದ ಮಾನವದೇಹ, ಸಿಂಹದ ಮುಖ ಹೊಂದಿದ್ದ ನರಸಿಂಹಾವತಾರಿಯಾಗಿ ಭಗವಂತನು ಹೊರಬಂದನು. ಹಿಂದೆಂದೂ ತನ್ನ ಜೀವಿತಾವಧಿಯಲ್ಲಿ ಕಂಡು ಕೇಳಿರದಿದ್ದ ಘರ್ಜನೆಯನ್ನು ಆಲಿಸಿದ ಹಿರಣ್ಯಕಶಿಪುವಿನ ಜಂಘಾಬಲವೇ ಉಡುಗಿಹೋಯಿತು. ಅವನು ನಿಸ್ಸಹಾಯಕನಾಗಿ ಭಯಭೀತನಾಗಿ ನಿಂತನು. ನರಸಿಂಹನು ತನಗೆದುರಾಗಿ ಬಂದ ದೈತ್ಯರನ್ನೆಲ್ಲ ಸಂಹರಿಸಿದನು. ಕೊನೆಯಲ್ಲಿ ಹಿರಣ್ಯಕಶಿಪುವಿನ ಬಳಿಗೆ ಬಂದು ಅವನನ್ನು ಅನಾಮತ್ತಾಗಿ ಎತ್ತಿಕೊಂಡು ಅರಮನೆಯ ಹೊಸ್ತಿಲಿಗೆ ಬಂದನು. ಹೊಸ್ತಿಲಿನ ಮೇಲೆ ಕುಳಿತುಕೊಂಡು ಹಿರಣ್ಯಕಶಿಪುವು ಅವನನ್ನು ತೊಡೆಯ ಮೇಲೆ ಮಲಗಿಸಿಕೊಂಡು, ಅವನ ಕರುಳನ್ನು ಬಗೆದು ಸಂಹರಿಸಿದನು.

ಹಿರಣ್ಯಕಶಿಪುವಿನ ಸಂಹಾರವಾದ ಮೇಲೂ ನರಸಿಂಹನ ಕೋಪ ಕಡಿಮೆಯಾಗಿರಲಿಲ್ಲ. ಬ್ರಹ್ಮದೇವನು ಇತರ ದೇವತೆಗಳೊಂದಿಗೆ ಪ್ರಹ್ಲಾದನ ಬಳಿಗೆ ಬಂದು ನರಸಿಂಹನನ್ನು ಭಕ್ತಿಯಿಂದ ಸ್ತುತಿಸುವಂತೆ ಕೇಳಿಕೊಂಡನು. ಅದರಂತೆಯೇ ಪ್ರಹ್ಲಾದನು ಭಗವಂತನ ಸ್ತುತಿ ಮಾಡಿದನು. ಅವನ ಭಕ್ತಿಗೆ ಮೆಚ್ಚಿದ ನರಸಿಂಹರೂಪಿ ನಾರಾಯಣನು ಶಾಂತನಾದನು. "ಮಗು ಪ್ರಹ್ಲಾದ, ನಿನ್ನಿಂದಾಗಿ ನಿನ್ನ ಹಿಂದಿನ ಮತ್ತು ಮುಂದಿನ ಹತ್ತು ತಲೆಮಾರು ವಂಶಜರು ಮುಕ್ತಿಯನ್ನು ಹೊಂದುತ್ತಾರೆ" ಎಂದು ಹರಸಿದನು. ಪ್ರಹ್ಲಾದನು ತಂದೆಯ ಉತ್ತರ ಕ್ರಿಯೆಗಳನ್ನು ಮುಗಿಸಿದ ನಂತರ, ರಾಜ್ಯಪಟ್ಟವನ್ನೇರಿ ಬಹುಕಾಲದವರೆಗೂ ರಾಜ್ಯವಾಳಿ ಮುಕ್ತಿ ಹೊಂದಿದನು.



# ಸ್ವಾಮಿ ವಿವೇಕಾನಂದರು ನಿರೂಪಿಸಿದ ನೀತಿಕಥೆಗಳು



ಡಾ. ಕೆ. ಅನಂತರಾಮು

## ಟಾಂಟಲಸ್ಸನ ನರಕಯಾತನೆ

ದೇವರು ಪ್ರೇಮನಿಧಿಯೂ ಸರ್ವಶಕ್ತನೂ ಆಗಿದ್ದಾನೆ. ಅವನು ಈ ಜಗತ್ತಿಗೆಲ್ಲ ಸಾರ್ವಭೌಮನಾಗಿ ರಾಜ್ಯಭಾರ ನಡೆಸುತ್ತಿದ್ದಾನೆ. ಆದರೆ ಅವನ ಆಳ್ವಿಕೆಯಲ್ಲಿ ಕಷ್ಟಗಳೂ ಕ್ರೌರ್ಯಗಳೂ ಸಂದೇಹಗಳೂ ದಿನದಿಂದ ದಿನಕ್ಕೆ ಹೆಚ್ಚುತ್ತಲೇ ಇವೆಯಲ್ಲ ಎಂದು ಬೇಸರವಾಗುತ್ತದೆ. ಸುಖಕ್ಕಿಂತ ದುಃಖವೇ ಹೆಚ್ಚಾಗಿ ಒಳ್ಳೆಯದಕ್ಕಿಂತ ಕೆಟ್ಟದ್ದೇ ಹೆಚ್ಚಾಗಿ, ಇದೊಂದು ಭಯಂಕರ ರಣರಂಗವಾಗಿ ಬಿಟ್ಟಿದೆಯಲ್ಲಾ ಎಂಬ ಸಮಸ್ಯೆ ಕಾಡತೊಡಗುತ್ತದೆ. ನಮಗೆ ಸುಖವನ್ನು ಅನುಭವಿಸಬೇಕೆಂಬ ಇಚ್ಛೆ ಬಲವಾಗಿದೆ. ಆದರೆ ಅದನ್ನು ಈಡೇರಿಸಿಕೊಳ್ಳಲು ಹೋದರೆ ಬಲವಾದ ಹೊಡೆತ ಬೀಳುತ್ತದೆ. ಹೀಗಾಗಿ ನಾವೆಲ್ಲ ಇಲ್ಲಿ ಟಾಂಟಲಸ್ಸನಂತೆ ಬಾಳಬೇಕಾಗಿದೆ ಎಂದು ಸ್ವಾಮಿ ವಿವೇಕಾನಂದರು ಹೇಳಿದ್ದಾರೆ. ಅವರು ಸೂಚನಾರೂಪದಲ್ಲಿ ಉಲ್ಲೇಖಿಸಿರುವ ಟಾಂಟಲಸ್ಸನ ಕಥೆಯನ್ನು ಪೂರ್ಣವಾಗಿ ನಾವು ಅರಿತುಕೊಂಡರೆ ವಿವೇಕಾನಂದರ ಈ ಮೇಲಿನ ಚಿಂತೆ ಮನಸ್ಸಿಗೆ ಸಮಾಧಾನವನ್ನು ಉಂಟು ಮಾಡುತ್ತದೆ.

ಟಾಂಟಲಸ್ ಎಂಬಾತನು ಗ್ರೀಕ್ ಪುರಾಣಗಳಲ್ಲಿ ಬರುವ ಒಬ್ಬ ದೊರೆಯಾಗಿದ್ದಾನೆ. ಅವನು ಲಿಡಿಯ ಎಂಬ ರಾಜ್ಯವನ್ನು ಆಳುತ್ತಿದ್ದನು. ಅವನು ಸ್ಯೂಸ್ ಎಂಬ ಹೆಸರಿನ ಮಹಾದೇವನ ಅಂಶದಿಂದ ಪ್ಲೂಟೋ ಎಂಬ ದೇವಸುಂದರಿಯಲ್ಲಿ ಜನಿಸಿದ್ದನು. ಸ್ಯೂಸ್ ಎಂದರೆ ಅವನು ಅತ್ಯಂತ ಬಲಿಷ್ಠನಾದ ದೇವತೆ. ಸ್ವರ್ಗಲೋಕದ ದೇವಸಭೆಯಲ್ಲಿ ಎಲ್ಲರಿಗಿಂತಲೂ ಉನ್ನತವಾದ ಸ್ಥಾನವನ್ನು ಅವನು ಅಲಂಕರಿಸಿದ್ದನು. ಅವನಿಗೊಂದು ಸ್ವರ್ಣಸಿಂಹಾಸನವಿತ್ತು. ಅದಕ್ಕೆ ಕಾಮನಬಿಲ್ಲಿನ ಏಳು ಬಣ್ಣಗಳೇ ಏಳು ಮೆಟ್ಟಿಲುಗಳಾಗಿದ್ದವು. ಸಿಡಿಲೇ ಅವನಿಗೆ ಆಯುಧವಾಗಿತ್ತು. ಈ ಮಹಾದೇವಮಾನವ ಸ್ಯೂಸನಿಗೆ ಟಾಂಟಲಸ್ಸನು ತುಂಬಾ ಬೇಕಾದವನಾಗಿದ್ದನು. ಸ್ವರ್ಗಲೋಕದಲ್ಲಿ ನಡೆಯುತ್ತಿದ್ದ ದೇವತೆಗಳ ಔತಣಕೂಟಕ್ಕೆ ಸ್ಯೂಸನು ಅವನನ್ನು ಆಗಾಗ ಬರಮಾಡಿಕೊಳ್ಳುತ್ತಿದ್ದನು. ದೇವತೆಗಳ ಪಂಕ್ತಿಯಲ್ಲೇ ಅವನಿಗೂ ಅಮೃತಾಹಾರ ಲಭಿಸುತ್ತಿತ್ತು. "ನಾನು ಸ್ಯೂಸನಿಗೆ ಅಚ್ಚುಮೆಚ್ಚಿನವನಾಗಿದ್ದೇನೆ, ಯಾರಿಗೇನೂ ಕಡಿಮೆಯವನಲ್ಲ, ದೇವತೆಗಳೊಡನೆ ಸಹಪಂಕ್ತಿಯಲ್ಲಿ ನಾನು ಸನ್ಮಾನಿತನಾಗುತ್ತಿದ್ದೇನೆ" ಎಂದು ಟಾಂಟಲಸ್ಸನು ಅಹಂಕಾರಕ್ಕೆ ಒಳಗಾಗಿಬಿಟ್ಟನು. 'ನಾನು' ಎಂಬ ತಪ್ಪಾದ ಕೇಂದ್ರವನ್ನು ಅವಲಂಬಿಸಿ ವ್ಯವಹರಿಸತೊಡಗಿದನು. ಒಮ್ಮೆ ತನ್ನ ಗೆಳೆಯರಿಗೆ ಕೊಡೋಣವೆಂದು, ದೇವತೆಗಳಿಗೆ ಮೀಸಲಾದ ಅಮೃತವನ್ನು ಭೂಮಿಗೆ ಕದ್ದು ತಂದು ತನ್ಮೂಲಕ ಸ್ಯೂಸನ ವಿಶ್ವಾಸಕ್ಕೆ ದ್ರೋಹವೆಸಗಿಬಿಟ್ಟನು.

ಆ ತರುವಾಯದಲ್ಲಿ ಒಮ್ಮೆ ಟಾಂಟಲಸ್ಸನು ಸ್ಯೂಸನನ್ನೂ ದೇವತೆಗಳನ್ನೂ ಕುರಿತು, "ನೀವೆಲ್ಲರೂ ನನ್ನ ರಾಜ್ಯಕ್ಕೆ ದಯಮಾಡಿಸಬೇಕು, ನಿಮಗಾಗಿ ನಾನೊಂದು ಭೋಜನಕೂಟವನ್ನು ಏರ್ಪಡಿಸಿದ್ದೇನೆ" ಎಂದು ಆಹ್ವಾನಿಸಿದನು. ಆ ಆಹ್ವಾನವನ್ನು ಒಪ್ಪಿಕೊಂಡು ಸ್ಯೂಸನೇ ಆದಿಯಾಗಿ ಎಲ್ಲ ದೇವತೆಗಳು ಟಾಂಟಲಸ್ಸನ ಮೇಲಿನ ಅಭಿಮಾನದಿಂದ ಲಿಡಿಯ ರಾಜ್ಯಕ್ಕೆ ಆಗಮಿಸಿದರು. ಟಾಂಟಲಸ್ಸನಾದರೂ ಆ ದೇವತೆಗಳ ದೈವತ್ವವನ್ನು ಪರೀಕ್ಷಿಸಬೇಕು, ಅವರೆಲ್ಲ ನರಭಕ್ಷಕರು ಎಂದು ಬಿಂಬಿಸಿ ಕೀಳ್ಗಳೆಯಬೇಕು ಎಂಬೆಲ್ಲ ದುಷ್ಟ ಆಲೋಚನೆಗಳಿಗೆ ಪಕ್ಕಾಗಿಬಿಟ್ಟನು. ತನ್ನ ಎಳೆಯ ಬಾಲಕನಾದ ಪೆಲೋಪ್ಸ್ ಎಂಬಾತನನ್ನು ನಿಷ್ಕರುಣೆಯಾಗಿ ಕೊಂದು, ಅವನ ಮಾಂಸದಿಂದ ಅಡುಗೆ ಮಾಡಿಸಿದನು. ಅದನ್ನು ಸ್ಯೂಸ್ ಆದಿಯಾಗಿ ಎಲ್ಲ ದೇವತೆಗಳಿಗೂ ಉಣಬಡಿಸಿದನು. ಭೋಜನದ ಆರಂಭದಲ್ಲಿಯೇ ಟಾಂಟಲಸ್ಸನ ಕುಹಕತನವೂ, ಕುತಂತ್ರವೂ ಬಯಲಾಗಿ, ಸ್ಯೂಸ್ ಮಹಾದೇವನು ಬಹುವಾಗಿ ಕೆರಳಿದನು. "ನನ್ನ ಸಲುಗೆಯನ್ನು ದುರುಪಯೋಗ ಪಡಿಸಿಕೊಂಡಿದ್ದೀಯೆ, ನನಗೆ ತಿರುಮಂತ್ರ ಹೇಳುವ ಉದ್ಧಟನಾಗಿದ್ದೀಯೆ, ನಿನ್ನ ಅಕೃತ್ಯಕ್ಕೆ ತಕ್ಕ ಶಿಕ್ಷೆಯನ್ನು ನೀನು ಅಧೋಲೋಕದಲ್ಲಿ ಅನುಭವಿಸು" ಎಂದು ಶಪಿಸಿದನು. ಅಸಹಾಯಕ ಎಳೆಯ ಬಾಲಕ ಪೆಲೋಪ್ಸನ ಮೇಲೆ ಮರುಕದೋರಿ ತನ್ನ ಮಂತ್ರಬಲದಿಂದ ಅವನನ್ನು ಬದುಕಿಸಿ ಮೇಲೆತ್ತಿದನು. ಶರಣಾರ್ಥಿಗಳು, ಅತಿಥಿಗಳು, ಯಾಚಕರು, ಕಷ್ಟಕ್ಕೆ ಸಿಲುಕಿದವರು ಮೊದಲಾದ ಎಲ್ಲರನ್ನೂ ಸ್ಯೂಸ್ ದೇವನು ರಕ್ಷಿಸುವವನಾಗಿದ್ದನು. ತಪ್ಪಿತಸ್ಥರನ್ನು ಮಾತ್ರ ಕ್ರೂರವಾಗಿ ದಂಡಿಸುತ್ತಿದ್ದನು. ಏಕಾಂಗಿಯಾಗಿ ಆಗಾಗ ಭೂಲೋಕದಲ್ಲಿ ವೇಷ ಮರೆಸಿಕೊಂಡು ಸಂಚರಿಸುತ್ತ, ದುಷ್ಟಶಿಕ್ಷಣ, ಶಿಷ್ಟಪರಿಪಾಲನೆ ಕಾರ್ಯಗಳನ್ನು ನಿರ್ವಹಿಸುತ್ತಿದ್ದನು. ಅಧೋಲೋಕಕ್ಕೆ ತಳ್ಳಲ್ಪಟ್ಟ ಟಾಂಟಲಸ್ಸನಿಗೆ ಘೋರವಾದ ಶಿಕ್ಷೆ ಪ್ರಾರಂಭವಾಯಿತು. ಅವನನ್ನು ಸೊಂಟಮಟ್ಟದವರೆಗೆ ಒಂದು ದ್ರಾಕ್ಷಾರಸದ ಕೊಳದಲ್ಲಿ ಹೂತುಹಾಕಿದರು. ಆ ಕೊಳದ ದಂಡೆಯಲ್ಲಿ ಸೇಬು, ಅಂಜೂರ, ದ್ರಾಕ್ಷಿ, ದಾಳಿಂಬೆ ಮುಂತಾದ ಹಣ್ಣಿನಮರಗಳು ಫಲಭಾರದಿಂದ ತೂಗಿತೊನೆಯುತ್ತಿದ್ದವು. ಹದವಾಗಿ ಮಾಗಿ ಗಮಗಮಿಸುತ್ತಿದ್ದ ಆ ಬಣ್ಣಬಣ್ಣದ ಹಣ್ಣುಗಳನ್ನು ನೋಡಿದರೆ ಸಾಕು, ಬಾಯಿಯಲ್ಲಿ ನೀರೂರುವಂತೆ ಮಾಡುತ್ತಿದ್ದವು. ಆ ಹಣ್ಣುಗಳಾದರೋ ಟಾಂಟಲಸ್ಸನಿಗೆ ಎಟುಕುವಂತೆಯೇ ಅವನ ಭುಜದ ಮೇಲೆ ತೊನೆದಾಡುತ್ತಿದ್ದವು. ಅವನಿಗೆ ಅಲ್ಲಿ ಯಾರೂ ಯಾವುದೇ ಆಹಾರವನ್ನು ಕೊಡುತ್ತಿರಲಿಲ್ಲ. ಕುಡಿಯಲು ನೀರನ್ನಾದರೂ ಕೊಡುತ್ತಿರಲಿಲ್ಲ. ಹಸಿವಿನಿಂದ ಕಂಗೆಟ್ಟ ಟಾಂಟಲಸ್ಸನು, ತನ್ನ ಭುಜದ ಮೇಲೆ ತೊನೆಯುತ್ತಿದ್ದ ಹಣ್ಣುಗಳನ್ನಾದರೂ ತಿನ್ನೋಣವೆಂದು ಕೈನೀಡುತ್ತಿದ್ದನು. ಹಾಗೆ ನೀಡುತ್ತಿದ್ದಂತೆ ಬಿರುಗಾಳಿಯು ಬೀಸಿ ಆ ಹಣ್ಣಿನ ಗೊಂಚಲುಗಳು ಕೈಗೆಟುಕದಂತೆ ದೂರಕ್ಕೆ ಸರಿದುಬಿಡುತ್ತಿದ್ದವು. ಬಿರುಗಾಳಿ ಶಾಂತವಾದ ಮೇಲೆ ಮತ್ತೆ, ಆ ಹಣ್ಣುಗಳು ಅವನ ಭುಜವನ್ನು ತಾಗುತ್ತ, ಪ್ರಲೋಭನೆಯನ್ನು ಉಂಟುಮಾಡುತ್ತಿದ್ದವು. 'ಈಗ ಎಟುಕಿಸಿಕೊಳ್ಳೋಣ' ಎಂದು ಪ್ರಯತ್ನಿಸಿದರೆ ಮತ್ತೆ ಬಿರುಗಾಳಿ ಹೊಡೆತದಿಂದ ದೂರಸರಿಯುತ್ತಿದ್ದವು. ಆ ವಿದ್ಯಮಾನವು ಪುನರಾವರ್ತನೆಗೊಳ್ಳುತ್ತಲೇ ಇತ್ತು.

"ಹೋಗಲಿ, ಈ ಹಣ್ಣುಗಳ ಸಹವಾಸ ಬೇಡ, ದ್ರಾಕ್ಷಾರಸವನ್ನಾದರೂ ಕುಡಿದು, ಬಾಯಾರಿಕೆಯನ್ನು ಇಂಗಿಸಿಕೊಳ್ಳೋಣ" ಎಂದು ಟಾಂಟಲಸ್ಸನು ತನ್ನ ಕೈಗಳನ್ನು ಬೊಗಸೆ ಮಾಡಿಕೊಂಡು ಕೆಳಕ್ಕೆ ಬಾಗುತ್ತಿದ್ದನು. ಒಡನೆಯೇ ಅದು ತಳಮಟ್ಟಕ್ಕೆ ತಲುಪಿ, ಕೈಗೆ ಎಟುಕದಂತಾಗಿಬಿಡುತ್ತಿತ್ತು. "ಅಯ್ಯೋ

ಹೀಗಾಯಿತಲ್ಲಾ” ಎಂದು ದುಃಖಿಸುತ್ತ ನೆಟ್ಟಗೆ ನಿಂತ ಬಳಿಕ ಮತ್ತೆ ದ್ರಾಕ್ಷಾರಸವು ಮೇಲೇರುತ್ತಿತ್ತು. ಇಷ್ಟೇ ಸಾಲದೆಂಬಂತೆ ಭಾರಿಯಾದ ಬಂಡೆಯೊಂದು ಆಗಲೋ ಈಗಲೋ ಅವನ ತಲೆಯ ಮೇಲೆ ಬಿದ್ದು ಅವನನ್ನು ಅಪ್ಪಚ್ಚಿ ಮಾಡಿಬಿಡುತ್ತದೆ ಎನ್ನುವ ಹಾಗೆ ತೂಗಾಡುತ್ತಿತ್ತು. ಟಾಂಟಲಸ್ಸನು ಅನುಭವಿಸುತ್ತಿದ್ದ ನರಕ ಹೀಗೆ ಅತ್ಯಂತ ಕ್ರೂರವಾಗಿತ್ತು. ಅವನು ಅನುಭವಿಸುತ್ತಿದ್ದ ಶಿಕ್ಷೆಯಿನ್ನೂ ಮುಗಿದೇ ಇಲ್ಲ. **‘ಏನನ್ನಾದರೂ ಆಸೆತೋರಿಸಿ, ಆಮೇಲೆ ಅದು ಕೈಗೆ ಸಿಕ್ಕದಂತೆ ವಂಚಿಸಿ ಗೋಳಾಡಿಸು’** ಎಂಬ ಕ್ರಿಯಾರ್ಥವಿರುವ ‘ಟಾಂಟಲೈಜ್’ ಎಂಬ ಆಂಗ್ಲ ಶಬ್ದವೊಂದಿದೆ. ಅದು ಟಾಂಟಲಸ್ ಮಹಾಶಯನಿಂದಲೇ ಹುಟ್ಟಿಕೊಂಡಿರುವುದಂತೆ !

ಈ ಟಾಂಟಲಸ್ಸನ ನರಕವನ್ನೇ ನಾವೆಲ್ಲರೂ ಅನುಭವಿಸುತ್ತಿರುವುದೇಕೆ ಎಂಬುದಕ್ಕೆ ಸರ್ವಸಮ್ಮತವಾದ ಕಾರಣವನ್ನು ಹೇಳುವುದು ಕಷ್ಟವಾಗಿದೆ. ಈ ಆಧ್ಯಾತ್ಮಿಕ ಅಸ್ಪಷ್ಟತೆ, ಈ ಸತ್ಯಾಸತ್ಯತೆಗಳ ಮಿಶ್ರಣ ಎಲ್ಲಿ ಸಂಧಿಸುತ್ತದೆ ಎಂಬುದು ಯಾರಿಗೂ ಗೊತ್ತಿಲ್ಲ. ನಾವು ಕನಸಿನ ಮಧ್ಯೆ ಇದ್ದೇವೆ; ಅರೆನಿದ್ರೆಯ, ಅರೆಎಚ್ಚರದ ಮಬ್ಬು ಬೆಳಕಿನಲ್ಲಿ ಸಂಚರಿಸುತ್ತಿದ್ದೇವೆ. ಅದನ್ನೇ ಮಾಯೆ ಎನ್ನಬಹುದು. ನಾವು ಮಾಯೆಯಲ್ಲಿಯೇ ಹುಟ್ಟಿ ಬೆಳೆದು ಅದರೊಳಗೇ ಜೀವಿಸುತ್ತಿರುವದರಿಂದ, ಅದರೊಳಗೇ ಯೋಚಿಸುತ್ತಿರುವುದರಿಂದ, ನಮಗೆ ಉತ್ತರವನ್ನು ಕಂಡುಕೊಳ್ಳುವುದು ಸಾಧ್ಯವಾಗುತ್ತಿಲ್ಲ. ಎಲ್ಲ ಚಿಂತನೆಗಳೂ, ಭಾವನೆಗಳೂ ಮಾಯೆಯ ಆವರಣದೊಳಗೇ ಇರುತ್ತವೆ. ಮಾಯಾವರಣವನ್ನು ದಾಟುವುದಕ್ಕೆ ಆತ್ಮಸಾಕ್ಷಾತ್ಕಾರಕ್ಕಿಂತ ಅನ್ಯಮಾರ್ಗವಿಲ್ಲ ಎಂದು ವಿವೇಕಾನಂದರು ಉಪದೇಶಿಸಿದ್ದಾರೆ. 

## ಸ್ವಾಮಿ ವಿವೇಕಾನಂದರ ಕರ್ಮಯೋಗ ! ವಿವೇಕಿ ಜನರ ತತ್ತ್ವಭೋಗ !

*(ಪುಟ ೨೧ ರಿಂದ)*

೭೫. ಪೂರ್ಣ ಒಂದೂ ಅಲ್ಲ, ಭಾಗ !
ಎರಡು ಭಿನ್ನ ಮುಖಗಳು ।
ಕರ್ಮ ಶಾಂತಿ ಕೂಡಿದಾಗ
ಬರಡು ಜಗದಿ ಸುಖಗಳು ॥

೭೬. ನೀರವತೆಯಲಿದ್ದ ನರಗೆ
ಊರ ಗೌಜು ಗದ್ದಲ ।
ನೀರಲಿದ್ದ ಮೀನ ಹೊರಗೆ
ದೂರ ಬಿಟ್ಟ ತೆರನಲ ॥

೭೭. ಸದ್ದುಗದ್ದಲಕ್ಕೆ ಗೋಣ–
–ಕೊಟ್ಟು ಸುಖಿಪ ಜೀವನು ।
ಎದ್ದುಬಿದ್ದು ಶಾಂತ ತಾಣ
ಬಿಟ್ಟು ಓಡಿ ಬರುವನು ॥

೭೮ ಶಾಂತಿ ಕೆಡಿಸಿ ಕರ್ಮಸಂಗ
ಜನರ ಹೊಸಕಿ ಹಾಕಿದೆ !
ಕ್ರಾಂತಿ ನಡೆಸಿ ಕುಣಿವ ಮಂಗ–
–ಮನವನಾಳಬೇಕಿದೆ ॥

೭೯. ಕರ್ಮಹೊರೆಯ ಮಾತ್ರದಿಂದ
ಶಾಂತಿ ನಶಿಸಲಾರದು !
ಕರ್ಮ ತೊರೆದ ಮಾತ್ರದಿಂದ
ಶಾಂತಿ ನೆಲಸಲಾರದು !

೮೦. ಕರ್ಮಕ್ಷೇತ್ರ ನಡುವಿನಲ್ಲೂ
ಘನದ ಶಾಂತಿ ಸಾಧ್ಯವು ।
ಕರ್ಮಗಾತ್ರ ಮಾಡುವಲ್ಲೂ
ಮನದ ಹಿಡಿತ ಬೋಧ್ಯವು ॥

೮೧. ದೂರ ಶಾಂತ ತಾಣದಲ್ಲೂ
ಹುರುಪು, ಕ್ರಿಯಾಶಕ್ತಿಯ ।
ಪೂರ ರಭಸ ಕೆಲಸದಲ್ಲೂ
ಮರುವಿನಂಥ ಶಾಂತಿಯ ॥

೮೨. ಅರಿತ ಧೀರ ಹಿಡಿತವನ್ನು
ಕಲಿತ ಕರ್ಮ–ಕೇಸರಿ ।
ನುರಿತ ಯೋಗಿ ಚಿತ್ತವನ್ನು
ನಲಿಸಗೊಡದ ಮಾದರಿ ॥

೮೩. ಆತ ಗಾಢ ಗಾಡಿ–ನಿಬಿಡ
ಭುವಿಯ ಹಾದಿ ನಡೆಯುತ ।
ವಾತ ದೂಡದಂಥ ಗೂಢ
ಗವಿಯ ಶಾಂತಿ ಸವೆಯುತ ॥

೮೪. ಚಿತ್ತವೃತ್ತಿ ಓಡದಂತೆ
ತಡೆವ ಕರ್ಮ ಮಾಡುತ ।
ಇತ್ತ ಏನೂ ಮಾಡದಂತೆ
ನಡೆವ ನಗೆಯ ಬೀರುತ ॥

೮೫. ಮೇರುವಂಥ ಲಕ್ಷ್ಯವಾಯ್ತು !
ಎಲ್ಲ ಜನಕೆ ಸಿಗದಲ ।
ಏರುವಾಸೆ ಇದ್ದರಾಯ್ತು
ಮೆಲ್ಲ ಸಾಗಬಹುದಲ ! ॥

೮೬. ನಿನ್ನ ಪಾಲ ಹೊಣೆಗಳನ್ನು
ತಪ್ಪದಂತೆ ಸಲಿಪುದು ।
ಸ್ವಿನ್ನನಾಗಿ[೪೬] ಸ್ವಾರ್ಥವನ್ನು
ಒಪ್ಪಮಾಡಿ ಎಸೆವುದು ॥

೮೭. ಆದಿಯಲ್ಲಿ ಚಾಳಿಗೆಡದೆ
ಸ್ವಾರ್ಥವೊಂದೇ ಮಿಡಿವುದು ।
ಕಾದಿದಲ್ಲಿ ಯತ್ನ ಬಿಡದೆ
ಸ್ವಾರ್ಥಮೆಲ್ಲ ಮಡಿವುದು ॥

೮೮. ಪಟ್ಟು ಬಿಡಲು ಸಲ್ಲ ! ಸ್ವಾರ್ಥ–
ಶಮನ ಯಜ್ಞ ಸಾಗಲಿ ।
ಸುಟ್ಟು ಕಡೆಗೆ ಎಲ್ಲ ಸ್ವಾರ್ಥ
ಅಮಲ ಬೆಳಕು ಹರಿಯಲಿ ॥

**ಕಠಿಣ ಪದಗಳ ಅರ್ಥ :** ೨೮. ಹುಡುಕಿ ಪಡೆದುಕೊಳ್ಳಲು ಯೋಗ್ಯವಾದ; ಅಪರೂಪದ, ಶ್ರೇಷ್ಠವಾದ. ೨೯. ದ್ರವ್ಯಗಳ ಸಮೂಹ; ರಾಶಿ ರಾಶಿ ವಸ್ತುಗಳು. ಜಾತ = ಗುಂಪು, ಸಮೂಹ. ೩೦A. ಅನುಸರಿಸಿ; ಅಂದರೆ ಆಸೆಯಿಂದ ದುಡಿದುಡಿದು. ೩೦B. ತಲೆಯಲ್ಲಿ ಹೊಕ್ಕಿದಷ್ಟನ್ನು ಮಾತ್ರ ೩೧. ಇಂದ್ರಜಾಲ, ಯಾರಿಗೇನು ಬೇಕೋ ಅದನ್ನು ಪಡೆವ ಯೋಗ್ಯತೆಯನ್ನು ಕರ್ಮ ಉಂಟುಮಾಡಿಕೊಡುತ್ತದಲ್ಲ! ಇದೇನು ಸಾಮಾನ್ಯವೇ! ದಿವ್ಯ ಕೈಚಳಕ ಅಲ್ಲವೇ! ೩೨. ಆಟ, ಚೆಲ್ಲಾಟ, ನಗೆಚಟಾಕಿ, ಪರಿಹಾಸ್ಯ. ೩೩. ಸುವರ್ಣ; ಹೊನ್ನು ೩೪. ಆರ್ತನಾದ, ಗೋಳಾಟ, ಗೊಣಗಾಟ (ಸಲ್ಲ). ೩೫. ಎಸಕ ಎಂದರೆ ಪ್ರಯತ್ನ. ಇಂದಿನ ನಮ್ಮ ಕರ್ಮದಂತೆ, ಪ್ರಯತ್ನದಂತೆ ಮುಂದಿನ ಬಾಳು. ೩೬. ತಕ್ಕುದಾದ. ಪರೀಕ್ಷೆಯಲ್ಲಿ ಉತ್ತಮ ಅಂಕ ಗಳಿಸುವ ಗುರಿ; ಅದಕ್ಕಾಗಿ ಹಗಲೂ ಇರುಳೂ ನಿದ್ದೆ ಬಿಟ್ಟು ಕಣ್ಣು ನೋಯಿಸಿಕೊಂಡು ಸಿನೆಮಾ ನೋಡಿದ್ದೇ ನೋಡಿದ್ದು ! ಇದೂ ಒಂದು ಶ್ರಮವೇ ! ಆದರೆ ಅಯುಕ್ತವಾದ ಶ್ರಮ. ಗುರಿಸೇರಲು ತಕ್ಕುದಾದ ದುಡಿಮೆಯೇ ಯುಕ್ತ ಶ್ರಮ. ೩೭. ಆಸಕ್ತಿಯಿಂದ ೩೮. ಆಸೆ ೩೯. ಉದ್ದೇಶ ೪೦. ಸಂಗ (ಕರ್ಮಫಲದಲ್ಲಿ ಆಸೆ) ಎಂಬ ಸಮುದ್ರವನ್ನು ೪೧. ಪ್ರೇಷ್ಠ ಎಂದರೆ ಅತ್ಯಂತ ಪ್ರಿಯವಾದದ್ದು. ಕರ್ಮಫಲ, ಸ್ವಾರ್ಥ – ಇವು ಯಾರಿಗೆ ತಾನೆ ಪ್ರಿಯವಲ್ಲ! ಸ್ವಲ್ಪ ಸಹನೆ ತಂದುಕೊಂಡು, ಕರ್ಮಫಲದ ಆಸೆಯನ್ನು ತ್ಯಾಗಮಾಡಿ ದುಡಿದು ನೋಡಿ ಎನ್ನುತ್ತಾರೆ ಸ್ವಾಮೀಜಿ. ೪೨. ಓಘ ಎಂದರೆ ರಭಸ, ಪ್ರವಾಹ, ಸ್ವಾರ್ಥದ ತವಕ ತುಂಬ ರಭಸವುಳ್ಳದ್ದು. ಮನುಷ್ಯನ ಶಕ್ತಿ, ಜ್ಞಾನ, ವಿವೇಕವೆಲ್ಲ ಆಸೆಯ ನೆರೆಯಲ್ಲಿ ಕೊಚ್ಚಿಕೊಂಡುಹೋಗಿಬಿಡುತ್ತದೆ. ಅದನ್ನು ತಡೆದರೆ, ಅಂದರೆ ನಿಸ್ವಾರ್ಥಭಾವದಿಂದ ಕರ್ಮಮಾಡಲು ಸಮರ್ಥನಾದರೆ, ಅಂತಹ ವ್ಯಕ್ತಿ ಅಪಾರಶಕ್ತಿಯ ಖನಿಯಾಗುತ್ತಾನೆ. ೪೩. ಆಸೆ ಇಲ್ಲದ, ಈಹ ಎಂದರೆ ಆಸೆ, ಪ್ರಯತ್ನ. ಕ್ರಿಸ್ತ, ಬುದ್ಧರಂತಹ ಆದರ್ಶಯೋಗಿಗಳಲ್ಲಿ ಆಸೆಯೂ ಇಲ್ಲ, ಯಾವುದನ್ನಾದರೂ ಪಡೆಯಲು ಅವರು ಹವಣಿಸುವುದೂ ಇಲ್ಲ. ನಿರ್ಮಮಭಾವದಿಂದ, ನಿರ್ವಿಕಾರ ಚಿತ್ತದಿಂದ ಕೆಲಸಕ್ಕಾಗಿ ಕೆಲಸವನ್ನು ಮಾಡಿಕೊಂಡುಹೋಗುತ್ತಿರುತ್ತಾರೆ! ೪೪. ನಿಷ್ಫಲವಾದ ೪೫. ಹೋರಾಡುವ ಜಾಗ, ರಣರಂಗ ೪೬. ಬೆವರಿಳಿಸಿ, ಕಷ್ಟಪಟ್ಟು ಶ್ರಮವಹಿಸಿ 

ಕಥೆ : ಸ್ವಾಮಿ ವಿಮೂರ್ತಾನಂದ ಚಿತ್ರ : ಶಂಕರ್

# ಶ್ರೀರಾಮಕೃಷ್ಣರಿಗೆ ಶರಣಾದ ಭಕ್ತ ದಂಪತಿಗಳು

**1** ೧೮೮೨ನೇ ಇಸವಿ. ನವಗೋಪಾಲ ಘೋಷ್ ಮತ್ತು ಅವನ ಪತ್ನಿಯಾದ ನಿಸ್ತಾರಣಿ ದೇವಿ ಶ್ರೀರಾಮಕೃಷ್ಣರ ದರ್ಶನಕ್ಕಾಗಿ ಬಂದಿದ್ದಾರೆ.




**2** ಮೂರು ವರ್ಷಗಳ ನಂತರ,




**3** ಶ್ರೀರಾಮಕೃಷ್ಣರು ಇಷ್ಟೊಂದು ದಿನಗಳಾದ ಮೇಲೆ ತನ್ನನ್ನು ನೆನಪು ಮಾಡಿಕೊಂಡಿದ್ದಾರೆ ಎಂದು ತಿಳಿದು ನವಗೋಪಾಲನಿಗೆ ಸಂತೋಷವಾಯಿತು. ಅವನು ತನ್ನ ಕುಟುಂಬದೊಡನೆ ಶ್ರೀರಾಮಕೃಷ್ಣರ ಬಳಿಗೆ ಒಡನೇ ಹೋದನು.

**4** ಒಂದು ದಿನ ನವಗೋಪಾಲನ ಮನೆಯಲ್ಲಿ ಭಾಗವತ ಪ್ರವಚನ ಏರ್ಪಾಡಾಗಿತ್ತು. ಹಾಗೆಯೇ ಶ್ರೀಕೃಷ್ಣ ಸಂಕೀರ್ತನೆಯೂ ಆಯೋಜಿತವಾಗಿತ್ತು. ಶ್ರೀರಾಮಕೃಷ್ಣರು ಈ ಸಮಾರಂಭದಲ್ಲಿ ಭಾಗವಹಿಸಿದ್ದರು. ಹಠಾತ್ತಾಗಿ ಅವರು ಭಗವದ್ಭಾವಕ್ಕೆ ಏರಿದರು ಮತ್ತು ಶ್ರೀಕೃಷ್ಣಭಾವದಿಂದ ನರ್ತನ ಮಾಡ ಲಾರಂಭಿಸಿದರು.



**5** ಆ ಸಮಯದಲ್ಲಿ ನವಗೋಪಾಲನು ಶ್ರೀರಾಮಕೃಷ್ಣರಿಗೆ ಮಾಲೆಯನ್ನು ಹಾಕಿದನು. ಭಕ್ತಿಯಿಂದ ಪ್ರಾರ್ಥನೆ ಮಾಡಿದನು.




**6** ಹಾಗೆಯೇ ಶ್ರೀರಾಮಕೃಷ್ಣರು ನಿಸ್ತಾರಣಿ ದೇವಿಗೂ ಉಪದೇಶ ನೀಡುತ್ತಿದ್ದರು. ಆಕೆಯ ಮನಸ್ಸು ಪರಿಶುದ್ಧವಾಗಿತ್ತು.




**7** ಇನ್ನೊಂದು ದಿನ... ಶ್ರೀರಾಮಕೃಷ್ಣರು ನಿಸ್ತಾರಣಿ ದೇವಿಗೆ ಒಂದು ಬೆಕ್ಕು ಮತ್ತು ಅದರ ಮರಿಯನ್ನು ಕೊಟ್ಟು ನೋಡಿಕೊಳ್ಳುವಂತೆ ಹೇಳಿದರು. ಅಲ್ಲಿಯವರೆಗೆ ಬೆಕ್ಕು ಶ್ರೀರಾಮಕೃಷ್ಣರ ಆಶ್ರಯದಲ್ಲಿ ಇತ್ತು. ಅವರು ನಿಸ್ತಾರಣಿಗೆ ಹೀಗೆ ಹೇಳಿದರು: "ಬೆಕ್ಕು ಮತ್ತು ಅದರ ಮರಿ ನನ್ನಲ್ಲಿ ಶರಣಾಗಿವೆ. ಅವುಗಳನ್ನು ಜಾಗರೂಕತೆಯಿಂದ ನೋಡಿಕೋ."



**8** ಸ್ವಲ್ಪ ವರ್ಷಗಳಾದ ನಂತರ... ಒಂದು ದಿನ ನಿಸ್ತಾರಣಿ ಜಪ ಮಾಡುತ್ತಿದ್ದಾಗ, ಶ್ರೀರಾಮನ ದರ್ಶನವನ್ನು ಪಡೆದುಕೊಂಡಳು.



**9** ಆಕೆ ಶ್ರೀರಾಮನ ಪಾದವನ್ನು ಸ್ಪರ್ಶಿಸಬೇಕೆಂದು ಬಾಗಿದಾಗ, ಅಲ್ಲಿ ಶ್ರೀರಾಮಕೃಷ್ಣರೇ ಕಾಣಿಸಿಕೊಂಡರು.



ತಾಯಿ, ಈಗ ನಿನಗೆ ಗೊತ್ತಾಯಿತೇ, 'ನಾನು ಯಾರು?' ಎಂದು.

**10** ಅನಂತರ ಶ್ರೀರಾಮಕೃಷ್ಣರು ಶ್ರೀರಾಮಚಂದ್ರನಲ್ಲಿ ಐಕ್ಯ ವಾದರು. ತಮ್ಮ ಉಪದೇಶಗಳಲ್ಲಿ ಶ್ರೀರಾಮಕೃಷ್ಣರು ಹೇಳುತ್ತಾರೆ, 'ಇಷ್ಟದೇವತೆಯ ದರ್ಶನವಾದಾಗ, ಗುರುವು ಅದರಲ್ಲಿ ಐಕ್ಯನಾಗುತ್ತಾನೆ' ಎಂದು.





**11** ನಿಸ್ತಾರಣಿ ದೇವಿ ಕೌಟುಂಬಿಕ ಜೀವನದಲ್ಲಿ ಒಂದು ಪ್ರತಿಜ್ಞೆ ಮಾಡಿದ್ದಳು. 'ತನಗೊಬ್ಬ ಮಗ ಹುಟ್ಟಿದರೆ, ಅವನನ್ನು ಶ್ರೀರಾಮಕೃಷ್ಣರ ಸೇವೆಗೆ ಸಮರ್ಪಿಸಿಬಿಡುತ್ತೇನೆ' ಎಂದು.

**12**

ಗುರುದೇವ,
ಈ
ಮಗುವನ್ನು
ನಿಮ್ಮ
ಪಾದಗಳಿಗೆ
ಸಮರ್ಪಿಸುತ್ತಿ
ದ್ದೇನೆ.
ದಯವಿಟ್ಟು
ಒಪ್ಪಿಸಿಕೊಳ್ಳಿ.




ಬಹಳ ವರ್ಷಗಳಾದ ನಂತರ ದೊಡ್ಡವನಾದ ಮೇಲೆ ಆ ಹುಡುಗನೇ ರಾಮಕೃಷ್ಣ ಮಹಾಸಂಘವನ್ನು ಸೇರಿದರು. 'ಸ್ವಾಮಿ ಅಂಬಿಕಾನಂದ' ಎಂಬ ಹೆಸರಿನಿಂದ ಅವರು ಪ್ರಖ್ಯಾತರಾದರು.

**13** ಶ್ರೀರಾಮಕೃಷ್ಣರ ಮಹಾಸಮಾಧಿಯ ನಂತರ ನವಗೋಪಾಲನು ಎಲ್ಲ ಮಕ್ಕಳಿಗೆ ಸಿಹಿಯನ್ನು ಹಂಚುತ್ತಿದ್ದನು. ಆಗ ಶ್ರೀರಾಮಕೃಷ್ಣರ ಗುಣಗಾನ ಮಾಡುತ್ತಿದ್ದನು.






**14** ೧೮೯೮ನೆಯ ಇಸವಿ ಫೆಬ್ರವರಿ ೬ ರಂದು ನವಗೋಪಾಲನ ಮನೆಯಲ್ಲಿ ನಡೆದ ಶ್ರೀರಾಮಕೃಷ್ಣರ ಪೂಜೆಯಲ್ಲಿ ಸ್ವಾಮಿ ವಿವೇಕಾನಂದರು ಪಾಲ್ಗೊಂಡರು. ಅಂದು ಅವರು ಹಾಡಿದರು, ನರ್ತಿಸಿದರು. ಗಾಢ ಧ್ಯಾನದ ನಂತರ ಅವರು '**ಸ್ಥಾಪಕಾಯ ಚ ಧರ್ಮಸ್ಯ**' ಎಂದು ಆರಂಭವಾಗುವ ಶ್ರೀರಾಮಕೃಷ್ಣರ ಬಗೆಗಿನ ಶ್ಲೋಕವನ್ನು ರಚಿಸಿ ಅಲ್ಲಿಯೇ ವಾಚಿಸಿದರು.

**15** ನಿಸ್ತಾರಿಣಿಗೆ ತುಂಬ ವಯಸ್ಸಾಯಿತು. ಆಕೆಯ ಆರೋಗ್ಯ ಕೂಡ ಕೆಟ್ಟಿತು. ಆದರೂ ಆಕೆ 'ಸಂದೇಶ' ಎಂಬ ಸಿಹಿತಿಂಡಿಯನ್ನು ಕೈಯಾರೆ ಮಾಡುತ್ತಿದ್ದಳು. ಅದನ್ನು ಸ್ವತಃ ಶ್ರೀರಾಮಕೃಷ್ಣರಿಗೆ ಅರ್ಪಿಸುತ್ತಿದ್ದಳು. ಕಡೆಗೆ ಶ್ರೀರಾಮಕೃಷ್ಣರ ಪವಿತ್ರ ನಾಮವನ್ನು ಉಚ್ಚರಿಸುತ್ತ, ಅವರ ಪಾದಪದ್ಮಗಳನ್ನು ಸೇರಿದಳು.






ಸ್ವಾಮಿ ವಿವೇಕಾನಂದರ ೧೫೦ನೇ ಜಯಂತಿ ಮಹೋತ್ಸವದ ಸಮಾರೋಪ ಸಮಾರಂಭಗಳು ರಾಮಕೃಷ್ಣ ಮಹಾಸಂಘದ ಮುಖ್ಯಕೇಂದ್ರವಾದ ಬೇಲೂರು ಮಠದಲ್ಲಿ ೨೦೧೪ ಜನವರಿ ೧೩ರಿಂದ ೩೧ರವರೆಗೆ ನಡೆದವು. ಜನವರಿ ೧೩ರಂದು ಗಂಗಾನದಿಯಲ್ಲಿ ದೋಣಿವಿಹಾರ ನಡೆಯಿತು. ಸಾಧುಬ್ರಹ್ಮಚಾರಿಗಳು ಮತ್ತು ಭಕ್ತರನ್ನು ಹೊತ್ತ ಸುಮಾರು ೩೫ ಅಲಂಕೃತ ಬೃಹತ್ ದೋಣಿಗಳು, ಕೊಲ್ಕತಾದ ಬಡ್ಜ್‌ಬಡ್ಜ್ ಎಂಬ ಸ್ಥಾನದಿಂದ ಖರ್ದಾ ಎಂಬ ಪ್ರದೇಶದವರೆಗೆ ಮೆರವಣಿಗೆಯಲ್ಲಿ ಸಾಗಿದವು. ಮಾರ್ಗಮಧ್ಯೆ ಅವು ಬೇಲೂರು ಮಠ ಮತ್ತು ದಕ್ಷಿಣೇಶ್ವರಗಳನ್ನು ಸಾಗಿಹೋದವು. ಈ ಅಪೂರ್ವ ದೋಣಿ ಮೆರವಣಿಗೆಯನ್ನು ಮಹಾಸಂಘದ ಉಪಾಧ್ಯಕ್ಷರಾದ ಪೂಜ್ಯ ಸ್ವಾಮಿ ಸ್ಮರಣಾನಂದಜಿ ಮಹಾರಾಜ್ ಉದ್ಘಾಟಿಸಿದರು. ಜನವರಿ ೧೯ರಂದು ರಾಮಕೃಷ್ಣ ಮಹಾಸಂಘದ ಅಧ್ಯಕ್ಷರಾದ ಪರಮಪೂಜ್ಯ ಸ್ವಾಮಿ ಆತ್ಮಸ್ಥಾನಂದಜಿ ಮಹಾರಾಜ್ ಸಮಾರೋಪ ಸಮಾರಂಭಗಳನ್ನು ವಿಧ್ಯುಕ್ತವಾಗಿ ಉದ್ಘಾಟಿಸಿದರು. ಹಾಗೆಯೇ, ಪಶ್ಚಿಮ ಬಂಗಾಳ ಸರ್ಕಾರದ ಆರೋಗ್ಯ, ಪಂಚಾಯತ್ ಮತ್ತು ಗ್ರಾಮೀಣ ಅಭಿವೃದ್ಧಿ ಮಂತ್ರಿಗಳಾದ ಶ್ರೀ ಸುಬ್ರತ ಮುಖರ್ಜಿ ಅವರು **'ಕಲೆ ಮತ್ತು ಕರಕುಶಲತೆಗಳ ಮೂಲಕ ರಾಷ್ಟ್ರೀಯ ಐಕ್ಯತೆ'** ಎಂಬ ವಿಷಯವಾಗಿ ನಿಯೋಜಿಸಲಾದ ವಸ್ತುಪ್ರದರ್ಶನವನ್ನು ಉದ್ಘಾಟಿಸಿದರು. ಅಂದು ಸಂಜೆ **'ಶಿವ ತಾಂಡವ ನೃತ್ಯ'** ಎಂಬ ಶಾಸ್ತ್ರೀಯ ನರ್ತನ ಕಾರ್ಯಕ್ರಮ ಜರುಗಿತು. ಜನವರಿ ೨೦ ಮತ್ತು ೨೧ರಂದು ಹೆಸರಾಂತ ಸಂಗೀತಗಾರರಿಂದ ಶಾಸ್ತ್ರೀಯ ಸಂಗೀತ ಕಛೇರಿಗಳು ನಡೆದವು. ಜನವರಿ ೨೫ ಮತ್ತು ೨೬ ರಂದು **'ಭಕ್ತ ಸಮ್ಮೇಳನ'**ವನ್ನು ಏರ್ಪಡಿಸಲಾಗಿತ್ತು. ಹಾಗೂ ಜನವರಿ ೨೭ ಮತ್ತು ೨೮ರಂದು **'೨೧ನೆಯ ಶತಮಾನದಲ್ಲಿ ಸ್ವಾಮಿ ವಿವೇಕಾನಂದರ ಜೀವನ ಮತ್ತು ಸಂದೇಶಗಳ ಪ್ರಸ್ತುತತೆ'** ಎಂಬ ವಿಷಯದ ಬಗ್ಗೆ ಅಂತಾರಾಷ್ಟ್ರೀಯ ವಿಚಾರಸಂಕಿರಣ ಮತ್ತು ಸರ್ವಧರ್ಮ ಸಮ್ಮೇಳನವನ್ನು ಏರ್ಪಡಿಸಲಾಗಿತ್ತು. ಹಾಗೂ **'ಯುವ ಸಮ್ಮೇಳನ'**ವನ್ನು ಜನವರಿ ೨೯ ಮತ್ತು ೩೦ರಂದು ಆಯೋಜಿಸಲಾಗಿತ್ತು. ಪ್ರತಿಯೊಂದು ಸಮಾವೇಶದಲ್ಲಿಯೂ ಸುಮಾರು ೧೨,೦೦೦ ಪ್ರತಿನಿಧಿಗಳು ಹಾಗೂ ಸುಮಾರು ೧೫೦೦ ಸಾಧುಗಳು, ಸಂನ್ಯಾಸಿನಿಯರು, ಪೋಷಕರು. ಕೇಂದ್ರ ಸಮಿತಿಯ ಸದಸ್ಯರು ಮತ್ತು ವಿಶೇಷ ಅತಿಥಿಗಳು ಪಾಲ್ಗೊಂಡಿದ್ದರು. ಅಂತಾರಾಷ್ಟ್ರೀಯ ವಿಚಾರಸಂಕಿರಣ ಮತ್ತು ಸರ್ವಧರ್ಮ ಸಮ್ಮೇಳನಗಳಲ್ಲಿ ಸುಮಾರು ೫೫೦೦ ಜನರು ಭಾಗವಹಿಸಿದ್ದರು. ಪರಮಪೂಜ್ಯ ಅಧ್ಯಕ್ಷ ಸ್ವಾಮೀಜಿಯವರು, ಉಪಾಧ್ಯಕ್ಷರಾದ ಸ್ವಾಮಿ ಸ್ಮರಣಾನಂದಜಿ ಮತ್ತು ಸ್ವಾಮಿ ಪ್ರಭಾನಂದಜಿ, ಪಶ್ಚಿಮ ಬಂಗಾಳದ ರಾಜ್ಯಪಾಲರಾದ ಶ್ರೀ ಎಂ. ಕೆ. ನಾರಾಯಣ್, ಛತ್ತೀಸಘರ್ ರಾಜ್ಯದ ರಾಜ್ಯಪಾಲರಾದ ಶ್ರೀ ಶೇಖರ್ ದತ್ತ, ಭಾರತ ಸರ್ಕಾರದ ಸಂಸ್ಕೃತಿ ಸಚಿವರಾದ ಶ್ರೀಮತಿ ಚಂದ್ರೇಶ್ ಕುಮಾರಿ ಕಟೋಚ್, ಪಶ್ಚಿಮ ಬಂಗಾಳದ ಮುಖ್ಯಮಂತ್ರಿಗಳಾದ ಕುಮಾರಿ ಮಮತಾ ಬ್ಯಾನರ್ಜಿ, ಪ್ರಸಾರಭಾರತಿಯ ಮುಖ್ಯಸ್ಥರಾದ ಶ್ರೀ ಜವಹರ್ ಸರ್ಕಾರ್ ಮತ್ತಿತರ ಗಣ್ಯವ್ಯಕ್ತಿಗಳು ವಿವಿಧ ಸಮಾವೇಶಗಳಲ್ಲಿ ಭಾಗವಹಿಸಿದ್ದರು. ಈ ಎಲ್ಲ ಸಮಾವೇಶಗಳಲ್ಲಿ ಭಾಷಣಗಳ ಜೊತೆಗೆ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳೂ ಜರುಗಿದವು. ಅವುಗಳಲ್ಲಿ ಭಕ್ತಸಂಗೀತ, ಶಾಸ್ತ್ರೀಯ ನೃತ್ಯ ಮತ್ತು ಆದಿವಾಸಿ ನೃತ್ಯಗಳು ಸೇರಿದ್ದವು. ಜನವರಿ ೩೧ರಂದು ಸ್ವಾಮಿ ವಿವೇಕಾನಂದರ ವಿಷಯವಾಗಿ ಲೇಸರ್ ಪ್ರದರ್ಶನ ಏರ್ಪಾಡಾಗಿತ್ತು.







*ಬೇಲೂರು ಮಠದ ಮಂದಿರದ ಮುಂಭಾಗದಲ್ಲಿ 'ವಿವೇಕಾನಂದ ಯುವಚೇತನ' ದ ವಿದ್ಯಾರ್ಥಿವೃಂದ*

ಮೈಸೂರಿನ ಶ್ರೀರಾಮಕೃಷ್ಣ ಆಶ್ರಮವು ಕರ್ನಾಟಕದಾದ್ಯಂತ ಬಂದಿದ್ದ ಸುಮಾರು ೩೦೦ ಕಾಲೇಜು ವಿದ್ಯಾರ್ಥಿಗಳಿಗೆ **'ವಿವೇಕಾನಂದ ಯುವಚೇತನ'** ಎನ್ನುವ ಆವಾಸಿ ಶಿಬಿರವನ್ನು ೨೦೧೩, ಸೆಪ್ಟೆಂಬರ್ ೨೩ರಿಂದ ೨೫ರವರೆಗೆ ಏರ್ಪಡಿಸಿತ್ತು. ಇವರಲ್ಲಿ ಆಯ್ಕೆಯಾದ ೧೫೦ ವಿದ್ಯಾರ್ಥಿಗಳು **'ವಿವೇಕಭಾರತ ದರ್ಶನ'** ಕಾರ್ಯಕ್ರಮದ ಅಂಗವಾಗಿ ೨೦೧೪, ಜನವರಿ ೨೯ ಮತ್ತು ೩೦ರಂದು ಬೇಲೂರು ಮಠದಲ್ಲಿ ನಡೆದ **'ಯುವ ಸಮ್ಮೇಳನ'**ದಲ್ಲಿ ಭಾಗವಹಿಸಿದ್ದರು. ಅವರೆಲ್ಲರೂ ಹಿರಿಯರ ಮಾರ್ಗದರ್ಶನದಲ್ಲಿ ಮೈಸೂರಿನಿಂದ ಒಟ್ಟಿಗೆ ಪ್ರಯಾಣ ಮಾಡಿದರು. ಶಿಸ್ತಿನ ದೈನಂದಿನ ದಿನಚರಿಯನ್ನು ಪ್ರಯಾಣದುದ್ದಕ್ಕೂ ಪಾಲಿಸಿದರು. ಯುವಸಮ್ಮೇಳನದಲ್ಲಿ ಉತ್ಸಾಹದಿಂದ ಭಾಗವಹಿಸಿದ ಅವರು ದಕ್ಷಿಣೇಶ್ವರ ಮುಂತಾದ ಪ್ರೇಕ್ಷಣೀಯ ಸ್ಥಳಗಳನ್ನು ದರ್ಶಿಸಿದರು. ಹಾಗೂ ಬೇಲೂರು ಮಠದ ಹಿರಿಯ ಸಂನ್ಯಾಸಿಗಳ ಆಶೀರ್ವಚನವನ್ನು ಶ್ರದ್ಧೆಯಿಂದ ಆಲಿಸಿದರು. ಮರುಪ್ರಯಾಣದ ಸಮಯದಲ್ಲಿ ಕೂಡ ವಿದ್ಯಾರ್ಥಿಗಳು ಶಿಸ್ತಿನ ದಿನಚರಿ ಪಾಲಿಸಿದರು. ಈ ವಿನೂತನ ಪುಣ್ಯಕಾರ್ಯವು ಆಶ್ರಮದ ಅಧ್ಯಕ್ಷರಾದ ಸ್ವಾಮಿ ಮುಕ್ತಿದಾನಂದಜಿ ಅವರ ಮಾರ್ಗದರ್ಶನದಲ್ಲಿ ದಕ್ಷತೆಯಿಂದ ಆಯೋಜಿತವಾಗಿತ್ತು ಹಾಗೂ ಭಾಗವಹಿಸಿದ ಬಾಲಕರ ಬಾಳಿನ ಭಾಗ್ಯದೀಪವಾಗಿತ್ತು.

## ಶ್ರೀರಾಮಕೃಷ್ಣ ಶಾರದಾಶ್ರಮ, ಪೊನ್ನಂಪೇಟೆ – 571216, ಕೊಡಗು ಜಿಲ್ಲೆ

Phone: 08274-249040, 249555; E-mail: srkseva@gmail.com; Wesbite: rkmponnampet.org

# ವಸಂತ ವಿಹಾರ

**(ಬೇಸಿಗೆ ರಜದಲ್ಲಿ ಗಂಡುಮಕ್ಕಳಿಗಾಗಿ ಮೌಲ್ಯವರ್ಧನಾ ಕಾರ್ಯಾಗಾರ)**

**27.4.2014 ರಿಂದ 4.5.2014**

ಪ್ರಿಯ ಸ್ನೇಹಿತರೇ,

ಪೊನ್ನಂಪೇಟೆಯ ಆಶ್ರಮದ ಆವರಣದಲ್ಲಿ ಭಗವಾನ್ ಶ್ರೀರಾಮಕೃಷ್ಣರ ಭವ್ಯವಾದ ವಿಶ್ವಭಾವೈಕ್ಯ ಮಂದಿರವನ್ನು ನಿರ್ಮಿಸಲಾಗಿದೆ. ಈ ದೇವಾಲಯವನ್ನು ಕೇಂದ್ರಬಿಂದುವಾಗಿಟ್ಟುಕೊಂಡು, ಹಲವಾರು ಸೇವಾಕಾರ್ಯಗಳನ್ನು ಆಶ್ರಮವು ನಡೆಸುತ್ತಿದೆ. 11 ರಿಂದ 15 ವರ್ಷ ವಯಸ್ಸಿನ ಶಾಲಾ ಮಕ್ಕಳಿಗಾಗಿ **'ವಸಂತ ವಿಹಾರ'** ಎಂಬ ಬೇಸಿಗೆ ಶಿಬಿರವನ್ನು 27.4.2014ರಿಂದ 4.5.2014ರವರೆಗೆ ನಡೆಸಲಿದ್ದೇವೆ. ಈ ಶಿಬಿರವು ಬೆಳಗಿನಿಂದ ಸಂಜೆಯವರೆಗೆ ಇರುತ್ತದೆ. ಪರಸ್ಥಳಗಳಿಂದ ಬರುವ ಮಕ್ಕಳಿಗೆ ಆಶ್ರಮದಲ್ಲಿ ಮತ್ತು ಹತ್ತಿರದ ಕೆಲವು ಆವಾಸಿ ಶಾಲೆಗಳಲ್ಲಿ ತಂಗುವ ವ್ಯವಸ್ಥೆಯನ್ನೂ ಮಾಡಲಿದ್ದೇವೆ. ಮಕ್ಕಳಿಗೆ ಯೋಗಾಸನ, ಪ್ರಾಣಾಯಾಮ, ಏಕಾಗ್ರತೆಯನ್ನು ಬೆಳೆಸಿಕೊಳ್ಳುವ ವಿಧಾನ, ವ್ಯಕ್ತಿತ್ವ ವಿಕಾಸ, ಮೌಲ್ಯಶಿಕ್ಷಣ, ಪ್ರಾರ್ಥನೆ ಮುಂತಾದವುಗಳನ್ನು ಹೇಳಿಕೊಡಲಾಗುವುದು. ನಿಮ್ಮ ಮಕ್ಕಳನ್ನು ಈ ಕಾರ್ಯಕ್ರಮಕ್ಕೆ ಕಳುಹಿಸಿಕೊಡುವುದರಿಂದ ನಮ್ಮ ಸನಾತನ ಧರ್ಮದ ಮೌಲ್ಯಗಳ ಬಗ್ಗೆ ಅವರಿಗೆ ಅರಿವು ಮೂಡುತ್ತದೆ. ಸ್ವಾಮಿ ವಿವೇಕಾನಂದರ ಆಶಯದಂತೆ ಅವರನ್ನು ಯೋಗ್ಯ, ಉಪಯುಕ್ತ ಪ್ರಜೆಗಳನ್ನಾಗಿ ರೂಪಿಸುವುದೇ ನಮ್ಮ ಉದ್ದೇಶ. **ಶಿಬಿರ ಶುಲ್ಕ : ವಸತಿ ರಹಿತ : ರೂ.350/– ; ವಸತಿ ಸಹಿತ : ರೂ.700/–.**
**ನೋಂದಾಯಿಸಿಕೊಳ್ಳಲು ಕೊನೆಯ ದಿನಾಂಕ : 15.4.2014**

ಪ್ರೀತಿ ಮತ್ತು ಶುಭಾಶಯಗಳೊಂದಿಗೆ,

**1. 11ರಿಂದ 15 ವರ್ಷ ವಯಸ್ಸಿನ ಗಂಡುಮಕ್ಕಳಿಗೆ ಮಾತ್ರ. 2. ಖಾಲಿ ಕಾಗದದಲ್ಲಿ ವಿದ್ಯಾರ್ಥಿಯ ಹೆಸರು, ವಯಸ್ಸು, ತರಗತಿ, ತಂದೆತಾಯಿಗಳ ಹೆಸರು, ವಿಳಾಸ, ಲ್ಯಾಂಡ್ ಫೋನ್ ಮತ್ತು ಮೊಬೈಲ್ ಫೋನ್ ನಂಬರುಗಳನ್ನು ಬರೆದು, ಡಿ.ಡಿ. ಮೂಲಕ ಹಣವನ್ನು ಆಶ್ರಮಕ್ಕೆ ಕಳುಹಿಸಿರಿ.**

**ಭಗವತ್ಸೇವೆಯಲ್ಲಿ ತಮ್ಮವ**
**ಸ್ವಾಮಿ ಬೋಧಸ್ವರೂಪಾನಂದ**
**ಅಧ್ಯಕ್ಷರು**

Managing Editor : Swami Muktidananda
Editor : Swami Vireshananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.D-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# Mt. Kailash & Manasa Sarovar Yatra



## Depr. Dates

May 21, 25, 30 June 03, 12, 21, 30
July 07, 18, 27 Aug 11, 20 Sep 06, 15

**Optional : 4 Days**
Mukthinath with Pokhara
Jomsom, Manokamana





## Highlights

| | | | | |
|---|---|---|---|---|
| Doctor / Nurse will accompany | Experience of over a decade | Batch size of max. 60 persons | Vegetarian Food | Homa & Pooja facilities at Manasa Sarovar |
| | Avail Rs. 30,000/- subsidy from Karnataka Govt. (Karnataka Citizens only) | Briefing Session at Bangalore | Bangalore Staff will accompany | Assistance in availing Travel Insurance |



# Shri Hansaa Travels

**Recognised by Department of Tourism, Govt. of Karnataka**

# 640, 40th Cross, 8th Block, Jayanagar, Bangalore - 70
: 080-26543891 / 26643276 / 0-9341215612 / 9341415612
: hansaatravels@gmail.com : hansaatravels.com

